

# ಸಿದ್ಧಗಂಗಾ



ಮೇ 2000




ಮೇ 12 ರಂದು ಜೆ.ಎಸ್.ಎಸ್. ಮಹಾವಿದ್ಯಾಪೀಠ, ಮೈಸೂರು ಇವರು ತಮಿಳುನಾಡಿನಲ್ಲಿರುವ ತಿಟ್ಟುಕಲ್ ಆವರಣದಲ್ಲಿ ನೂತನವಾಗಿ ನಿರ್ಮಿಸಲಾಗಿರುವ ಜೆ.ಎಸ್.ಎಸ್. ಪಬ್ಲಿಕ್ ಸ್ಕೂಲ್ ಮತ್ತು ವಿದ್ಯಾರ್ಥಿನಿಲಯದ ಉದ್ಘಾಟನಾ ಸಮಾರಂಭದಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಆಶೀರ್ವಚನ ನೀಡುತ್ತಿರುವುದು. ಈ ಸಂದರ್ಭದಲ್ಲಿ ಸುತ್ತೂರು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು, ಕೇಂದ್ರ ಸಚಿವರಾದ ಶ್ರೀ ವಿ. ಶ್ರೀನಿವಾಸಪ್ರಸಾದ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



॥ ಓಂ ಶ್ರೀ ಗುರು ಬಸವ ಲಿಂಗಾಯನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೩೬          ಮೇ ೨೦೦೦          ಸಂಚಿಕೆ : ೫

## ಒಳಪುಟಗಳಲ್ಲಿ ......




**ವಿಳಾಸ :**
"ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪

**ಚಂದಾ ವಿವರ :**
ವಾರ್ಷಿಕ ಚಂದಾ ರೂ. ೬೦.
ಆಜೀವ ಸದಸ್ಯತ್ವ ರೂ. ೫೦೦.
ಬಿಡಿ ಪ್ರತಿ ರೂ. ೫.00

# ಬಸವ ಜಯಂತಿ, ಬರಗಾಲ, ಮುಷ್ಕರ...

ಇದು ಜಯಂತಿಗಳ ಕಾಲ. ಒಂದಲ್ಲಒಂದು ಜಯಂತಿ ದಿನವೂ ಇದ್ದದ್ದೇ. ಜಯಂತಿಯ ಹಿಂದೆ ಲೋಕಕಲ್ಯಾಣಕ್ಕೆ ಶ್ರಮಿಸಿದ 'ಮನಸ್ಸು'ಗಳ ಜೀವನ ಚರಿತ್ರೆಯಿರುತ್ತದೆ. 'ಮಹಾತ್ಮರಂ ನೆನೆವುದೇ ಘನಮುಕ್ತಿಪದಂ' ಎನ್ನುತ್ತಾರೆ ಮಗ್ಗೆಯ ಮಾಯಿದೇವರು. ಬಸವಣ್ಣ ಹುಟ್ಟಿದ್ದು ಕ್ರಿ.ಶ. 1132 ಎನ್ನುತ್ತದೆ ಚರಿತ್ರೆ. ಆದರೆ ಜನಪದರ ಕಲ್ಪನೆ ಇನ್ನೂ ಭವ್ಯ. ಶ್ರೀಮಂತ ಭವ್ಯ. ಅವರೆನ್ನುತ್ತಾರೆ 'ಭೂಮಿ ಹುಟ್ಟುವ ಮುನ್ನ ಭೂಮಿ ಕಟ್ಟುವ ಮುನ್ನ ಭೂಪ ಹುಟ್ಟಿದ ಬಸವಣ್ಣ'. ಜನಪದರ ನಂಬುಗೆಯಲ್ಲಿ ದಾರ್ಶನಿಕ ಸತ್ಯವಿದೆ. ಆದಿ ಅನಾದಿಯಿಂದತ್ತತ್ತ ಬಸವಣ್ಣ ಎನ್ನುತ್ತದೆ ವಚನ ಧರ್ಮ. 'ಬಸವ' ಎಂಬುದು ವ್ಯಕ್ತಿತಾನಾಗುಳಿದಿಲ್ಲ ಇಂದು, ಮಂತ್ರವಾಗಿದೆ ಗ್ರಾಮೀಣ ಪವಿತ್ರಾತ್ಮರ ಬಾಳಿನಲ್ಲಿ. ಎದ್ದರೆ, ಬಿದ್ದರೆ, ನಿಂತರೆ, ಕುಂತರೆ, ಗಾಡಿ ಹೊಡೆವಾಗ ಎತ್ತು ಮುಗ್ಗರಿಸಿದರೆ, ಗಾಡಿ ಒಗ್ಗಾಲಿಗೆ ಬಿದ್ದರೆ ಬಸವಾ ಎನ್ನುತ್ತಾರೆ. ಬಸವಮಂತ್ರ ಜಪಿಸುತ್ತಾರೆ. ನಿತ್ಯ ಬಸವ ಜಯಂತಿ ಅವರಿಗೆ. 'ನಿಮ್ಮ ನೆನೆದಾಗಲೇ ಎನ್ನ ಉದಯ' ಎಂಬ ಭಾವನೆ ಅವರಲ್ಲಿ. ಬಸವಣ್ಣ 'ಉತ್ತು ಬಿತ್ತುವ' ಮಂತ್ರಕೊಟ್ಟ ದ್ರಷ್ಟಾರ. 'ಕೃಷಿಕೃತ್ಯಕಾಯಕದ ಸದ್ಭಕ್ತರ ಪಾದವನರಿದಿಪ್ಪ ಪದವಿ'ಯನ್ನಾಗಿಸಿದ ಜನಪದರ ಬಸವಣ್ಣನ ಜಯಂತಿಯ ಆಚರಣೆ, ಉತ್ಸವ, ಮೆರವಣಿಗೆ, ಪ್ರವಚನ, ಪ್ರಶಸ್ತಿಪ್ರದಾನ, ವಿಚಾರಸಂಕಿರಣ, ಗ್ರಂಥ ಪ್ರಕಾಶಗಳ ರೂಪದಲ್ಲಿ ನಡೆದಿರುವುದು ಶ್ಲಾಘನೀಯವಾದುದಾದರೂ, ಆಚಾರ-ವಿಚಾರ ಶುದ್ಧಿಯಿಲ್ಲದೆ ಆಡಂಬರ-ಅಬ್ಬರಗಳಿಗೆ ಸೀಮಿತವಾಗುವುದು ಜಯಂತಿಯ ವಿಪರ್ಯಾಸವಾದೀತು! 'ಅಂತರಂಗ ಬಹಿರಂಗ' ಮಲಿನವಾಗಿರುವ ಸದ್ಯದ ಸಂದರ್ಭದಲ್ಲಿ ಹುತ್ತವ ಬಡಿಯದೆ, ಮನದ ಮೈಲಿಗೆ ಕಳೆವ ಆಚರಣೆಗಳು ಬೇಕು. ಪಾನಮತ್ತನಾಗಿ ಬಸವಣ್ಣನವರ ವಚನಗಳನ್ನು ಕುರಿತು ಉಪನ್ಯಾಸ ನೀಡುವುದಕ್ಕಿಂತ ಶುದ್ಧ ಚಾರಿತ್ರ್ಯದಿಂದ ಸುಮ್ಮನಿರುವುದೇ ಒಳ್ಳೆಯದಲ್ಲವೆ. ಬಸವಜಯಂತಿ ಕಾಯಕದ ಜಯಂತಿಯಾಗಬೇಕು, ದಾಸೋಹದ ಜಯಂತಿಯಾಗಬೇಕು. ಮಾನವೀಯತೆಯ ಜಯಂತಿಯಾಗಬೇಕು. ಕಂಬಾಲಪಲ್ಲಿಯಂಥ ಗ್ರಾಮದ ದುರಂತ ನಡೆಯಬಾರದ ಜೀವನಶೈಲಿಯಾಗಬೇಕು.

ಪ್ರಾಕೃತಿಕ ವಿಪ್ಲವಕ್ಕೆ ಜೀವಜಗತ್ತು ನಡುಗುತ್ತದೆ, ತತ್ತರಿಸುತ್ತದೆ. ರಾಜಸ್ಥಾನ, ಗುಜರಾತ್ ರಾಜ್ಯಗಳಲ್ಲಿ ತಲೆದೋರಿರುವ ಜಲಕ್ಷಾಮ ಅತ್ಯಂತ ಭೀಕರವಾದುದು. ಮುನ್ನೂರು ವರ್ಷಗಳಿಂದ ಇಂಥ ಕ್ಷಾಮ ಕಾಣಿಸಿರಲಿಲ್ಲ.

ಆದರೆ ಇದೀಗ ನೀರಿಲ್ಲದೆ ಜೀವಬಿಡುತ್ತಿರುವ ಜನ-ಜಾನುವಾರುಗಳ ವಾರ್ತೆಯನ್ನು ಕೇಳಿದಾಗ ಹೃದಯವೇ ನಿಂತುಹೋಗುವಂತಾಗುತ್ತದೆ. ಒಂದು ಬಿಂದಿಗೆ ನೀರಿಗೆ ಮೂವತ್ತು ಕಿ.ಮೀ. ದೂರ ನಡೆದು ಹೋಗಬೇಕಾಗಿದೆ ದುಃಸ್ಥಿತಿ. ರೈಲುಗಳಲ್ಲಿ ನೀರು ಸಾಗಿಸುವ ಪ್ರಯತ್ನ. ಬಿರುಕುಬಿಟ್ಟ ನೆಲ. ಒಣಗಿಹೋದ ದನಕರುಗಳು, ಕಂಗಳಲ್ಲಿ ಸಾವಿನ ಛಾಯೆ ತೋರುವ ಜನ. ಸ್ವಾತಂತ್ರ್ಯ ಬಂದು ಐವತ್ತೆರಡು ವರ್ಷಗಳಾದುವು. ಕುಡಿವ ನೀರನ್ನು ಎಲ್ಲ ಗ್ರಾಮಗಳಿಗೆ ಒದಗಿಸಲಾರದಂಥ ಆಡಳಿತ ನಮ್ಮದು. ಒಂದು ಕಡೆ ಸಚಿವರ ವಾಸಗೃಹಗಳಿಗೆ ಲಕ್ಷಲಕ್ಷ ರೂಪಾಯಿಗಳಲ್ಲಿ ಬಣ್ಣಬಂಗಾರ. ವಾಸ್ತುಶಾಸ್ತ್ರದ ಘನಘೋರ ಕರ್ಮಯಜ್ಞ, ಇನ್ನೊಂದು ಕಡೆ ಕರುಳು ನೆನೆಸಲು ಅಗತ್ಯವಾದ ನೀರಿನ ಕೊರತೆ. ಎಂಥ ವಿಪರೀತ! ಕಳೆದ ಸೆಪ್ಟೆಂಬರ್ ತಿಂಗಳಿನಲ್ಲಿಯೇ ವಿಜ್ಞಾನಿಗಳು ಗುಜರಾತ್, ರಾಜಸ್ಥಾನಗಳ ಜಲಕ್ಷಾಮದ ಬಗ್ಗೆ ಮುನ್ಸೂಚನೆ ಕೊಟ್ಟಿದ್ದರೂ, ಪ್ರಭುಗಳಿಗೆ ಕೇಳಿಸಲಿಲ್ಲ. ಅದರ ಫಲ ಇಂದಿನ ಕರುಣಾಜನಕ ದೃಶ್ಯ.

ನಮ್ಮ ದೇಶದಲ್ಲಿ ಮುಷ್ಕರಗಳಿಗೇನೂ ಅಭಾವವಿಲ್ಲ. ಮೊನ್ನೆಯಿಂದ ಮುಷ್ಕರನಿಷ್ಠರಾಗಿದ್ದ ಪದವಿಪೂರ್ವ ಕಾಲೇಜಿನ ಶಿಕ್ಷಕ ಬಂಧುಗಳು ಮುಷ್ಕರ ನಿಲ್ಲಿಸಿ ಮೌಲ್ಯಮಾಪನ ಸೇವೆಯಲ್ಲಿ ತೊಡಗಿದ್ದಾರೆ. ಸಂತೋಷ ನೀಡಿದ್ದಾರೆ. ಶಿಕ್ಷಕ ಜನಾಂಗನಿರ್ಮಾಣ ಶಿಲ್ಪಿ ಎಂಬುದನ್ನು ನಮ್ಮ ಆಡಳಿತಗಾರರು ಏಕೆ ಯೋಚಿಸುವುದಿಲ್ಲ. ಅವರ ಬೇಡಿಕೆಗಳನ್ನು ಸಮಾಧಾನಚಿತ್ತದಿಂದ ಆಲಿಸುವುದಿಲ್ಲವೇಕೆ? ಮುಷ್ಕರ ಮಾಡಿದಾಗ ಮಾತ್ರವೇ ಅವರತ್ತ ಕಣ್ಣು ತಿರುಗಿಸುವುದೇಕೆ? ಇಂದು ಆಡಳಿತದ ಸೂತ್ರಗಳನ್ನು ಕೈ ಹಿಡಿದಿರುವ ಸಚಿವರು, ಶಾಸಕರು, ಅಧಿಕಾರಿಗಳು, ಎಲ್ಲರೂ ಶಿಕ್ಷಕರಿಂದ ಕಲಿತವರಲ್ಲವೇ? ಅವರನ್ನು ಇಕ್ಕಟ್ಟಿಗೆ ಸಿಕ್ಕಿಸುವುದೇಕೆ? ವಿದ್ಯಾರ್ಥಿಗಳು, ಪೋಷಕರು ಶಿಕ್ಷಕರ ಬಗ್ಗೆ ತಪ್ಪು ಅಭಿಪ್ರಾಯ ಬರುವಂತೆ ನಡೆಸಿಕೊಳ್ಳುವುದೇಕೆ? ಶಿಕ್ಷಕ ಬಂಧುಗಳೂ ತಾಳ್ಮೆಯನ್ನು ಎಷ್ಟು ತಾಳಿಯಾರು. ಬೇಡಿಕೆಗಳಲ್ಲಿ ನ್ಯೂನತೆಗಳಿರಬಹುದು. ಅವುಗಳನ್ನು ಶಿಕ್ಷಕರ ಮನವೊಲಿಸಿ ಒಪ್ಪಿಸಬಹುದಲ್ಲವೆ? ನಮ್ಮ ಮುಂದೆ ವಿದ್ಯಾರ್ಥಿಗಳ ಭವಿಷ್ಯ, ರಾಷ್ಟ್ರದ ಭವಿಷ್ಯವಿದೆ ಎಂಬುದು ಎಲ್ಲರೂ ಗಮನಿಸಬೇಕಾದ ಅಂಶ. ಇರಲಿ. ಮುಷ್ಕರ ಮುಗಿದು, ಉತ್ತರಪತ್ರಿಕೆಗಳ ಮೌಲ್ಯಮಾಪನ ಬಹಿಷ್ಕಾರ ಹಿಂತೆಗೆದುಕೊಂಡದ್ದು ಅಭಿನಂದನೀಯವೆನ್ನುತ್ತದೆ **'ಸಿದ್ಧಗಂಗಾ'**.

- ಸಂಪಾದಕ





## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಜಪವು ನೀನೆ ಅಯ್ಯ ತಪವು ನೀನೇ ಅಯ್ಯ
ನಯ ನಿನ್ನದು ಎನಗೆ ಶ್ರೀಮಂತ್ರ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶಿವನಾಮ ತಂತ್ರವೆ ಶಿವಕಾಮಧೇನುವೆ
ತವನಾಮವೆನಗೆ ಜಯ ವಿಭುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸರಿಯ ಹೊತ್ತಿನಲೆದ್ದು ಗುರು ನಿಮ್ಮನೆನೆದೇನು
ಹರಿವಗಂಗೆಯಲಿ ಮಿಂದೇನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬರುವ ಮೋಡವ ತಡೆದ ಸುರಿವ ಮಳೆ ನಿಲ್ಲಿಸಿದ
ಶರಣ ಬಸವನ ಕಥೆಯ ತೋರಿಸಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹಸಿವೆ ನಿಲ್ಲೆಂದರು ತೃಷೆಯು ತಡೆ ಹಿಡಿದರು
ರಸದ ನಿನ್ನ ಸೊಲ್ಲ ಕೇಳಿದರು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಏನು ಉಲ್ಲಸ ತಂದೆ ಏನು ಉತ್ಸಹ ನಿನಗೆ
ಬಸವತಂದೆಯನು ಸ್ಮರಿಸುವಲಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ವೇದಾಗಮ ವಚನಗಳು ವಾಚೋವಿಧೇಯಗಳು
ಆದಾವುನಗುನಗುತ ತವಪದವಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮಾಣೆ ನನ್ನ ತಂದೆ ನಿಮ್ಮ ಪ್ರಮಥರಾಣೆ
ನಿಮ್ಮಂಥ ಗುರುವನಾಕಾಣೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಾವಾವಲಂಬಿಗಳು ದೇವದೇವತೆಗಳು
ಭಾವವಿದ್ದರೆ ಕಲ್ಲೇದೇವರು ಎಂದರುಹಿದ ।
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭೂಲೋಕಕಧಿಕನೆ ಭೂಲೋಕದ ರತ್ನವೆ
ಭೂಲೋಕ ಕಂಡ ಅಚ್ಚರಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

- ಹೆಚ್.ವಿ. ವೀರಭದ್ರಯ್ಯ



## ಶ್ರೀ ವಾಣಿ

# ಬಸವಣ್ಣ

ಬಸವಜಯಂತಿ ಉತ್ಸವಗಳು, ಸಮಾರಂಭಗಳು, ವಚನಸ್ಪರ್ಧೆಗಳು, ಪ್ರಶಸ್ತಿಪ್ರದಾನಗಳು, ವಿಚಾರಗೋಷ್ಠಿಗಳು ಎಲ್ಲೆಲ್ಲೂ ನಡೆದಿವೆ. ಸಂತೋಷದ ವಿಚಾರ. ಬಸವಣ್ಣನವರು ಚಾರಿತ್ರಿಕ ವ್ಯಕ್ತಿಗಳು. ಮಾನವೀಯ ಸಹಜ ಭಾವನೆ, ಅನುಭವ, ಅನಿಸಿಕೆಗಳನ್ನು ಅರಿತವರು, ಅನುಭವಿಸಿದವರು. ಮನುಕುಲದ ಏಳ್ಗೆಗೆ ಜೀವನದುದ್ದಕ್ಕೂ ಶ್ರಮಿಸಿದವರು. ಹೋರಾಟ ನಡೆಸಿದರು. ಶ್ರಮಸಂಸ್ಕೃತಿಯನ್ನು ಗೌರವಿಸಿದರು. ಪ್ರಜಾಪ್ರಭುತ್ವದ ಬೀಜ ಬಿತ್ತಿದ ದೇವಕೃಷಿಕರು. ಗುಲಾಮ ಪದ್ಧತಿಯನ್ನು ಅತ್ಯಂತ ವಿನೂತನವಾಗಿ ನಿವಾರಿಸಿದ ಶಾಂತಕ್ರಾಂತಿಕಾರರು. ಅವರು ಆ ಜನಿಸಿ ತೋರಿಸಿದ ಕಾಯಕತತ್ವ ಸರ್ವಶ್ರೇಷ್ಠ ಜೀವನವಿಧಾನ ಅಂದಿಗೆ ಮಾತ್ರವಲ್ಲ ಇಂದಿಗೂ ಮುಂದೆಂದಿಗೂ. ಬಸವಣ್ಣನವರು ಆತ್ಮಪ್ರಶಂಸಾ ವಿರೋಧಿಗಳು. "ಎನಗಿಂತ ಕಿರಿಯರಿಲ್ಲ"ವೆಂದು ಭಾವಿಸಿ ನಡೆದುಕೊಂಡ ವಿನಯಶೀಲರು. ಆತ್ಮಜ್ಞಾನದ ರತ್ನಗಣಿಯಾಗಿದ್ದ ಬಸವಣ್ಣನವರು ಅತ್ಯುತ್ತಮ ಮನೋವಿಜ್ಞಾನಿಗಳಾಗಿದ್ದರು. ಮನಸ್ಸಿನ ಮೇಲೆ ಪ್ರಭುತ್ವವನ್ನು ಸಾಧಿಸುವುದೇ ದೊಡ್ಡಸಾಧನೆ ಎಂದರಿತವರು. ತಮ್ಮ ಚಿತ್ತ 'ಅನ್ಯವಿಷಯಕ್ಕೆಳಸದಂತೆ' ಸದಾ ಎಚ್ಚರವಾಗಿದ್ದು 'ಕೂಡಲಸಂಗಮದೇವರನ್ನು ಒಲಿಸಬಂದ ಪ್ರಸಾದ ಕಾಯವ ಕೆಡಿಸಬಾರದೆಂದು' ಕಾಯವೇ ಕೈಲಾಸವೆಂದು ಗೌರವಿಸಿದವರು.

ಬಸವಣ್ಣನವರು ಸಂಸ್ಕೃತ ವಿರೋಧಿಗಳೆಂದು ಕೆಲವರು ಭಾವಿಸಿದ್ದಾರೆ. ಅದು ಸರಿಯಲ್ಲ. ಸಂಸ್ಕೃತ ಭಾಷೆಯಲ್ಲಿ ಅಪಾರ ಜ್ಞಾನಸಂಪಾದನೆ ಅವರದಾಗಿತ್ತು. ಅವರ ವಚನಗಳೇ ಅದಕ್ಕೆ ಸಾಕ್ಷಿಯಾಗಿವೆ. ವೇದಾಗಮ ಉಪನಿಷತ್ತುಗಳನ್ನು ತಲಸ್ಪರ್ಶಿಯಾಗಿ ಅರಿತವರು ತಮ್ಮರಚನಗಳಲ್ಲಿ ಅನೇಕ ಸಂದರ್ಭಗಳಲ್ಲಿ ಅವುಗಳಿಂದ ಉದ್ಧರಣಗಳನ್ನು ಕೊಟ್ಟಿದ್ದಾರೆ. ಕನ್ನಡದ ಬಗ್ಗೆ ಬಸವಣ್ಣನವರದು ಮಾತೃಪ್ರೀತಿ, ಅಪ್ಪಟ ಪ್ರೇಮ.. ಕನ್ನಡ ಭಾಷೆಗೆ ಕಸುವು ಕಟ್ಟಿದವರು.

ದಲಿತರ ಸೂರ್ಯ ಬಸವಣ್ಣ. ಜಾಗತಿಕ ಇತಿಹಾಸದ ಉಜ್ವಲ ಧರ್ಮ ದ್ರಷ್ಟಾರ. ಸ್ವಾಮಿ ವಿವೇಕಾನಂದರಿಗಿಂತ, ಮಹಾತ್ಮ ಗಾಂಧೀಜಿಯವರಿಗಿಂತ, ಡಾ. ಅಂಬೇಡ್ಕರರಿಗಿಂತ ಮೊದಲು ಅಸ್ಪೃಶ್ಯತೆಯ ಬಗ್ಗೆ ವಿರೋಧ ವ್ಯಕ್ತಪಡಿಸಿದ, ಹೋರಾಟನಡೆಸಿದ. ಅವರೊಡನೆ ತಮ್ಮನ್ನು ಸಮೀಕರಿಸಿಕೊಂಡ, ಅಸ್ಪೃಶ್ಯರ ಉದ್ಧಾರದಲ್ಲಿ ಆತ್ಮಸಾಕ್ಷಾತ್ಕಾರ ಕಂಡುಕೊಂಡ, ಪದವಿಪಟ್ಟವನ್ನೂ ತ್ಯಾಗ ಮಾಡಿದ ಆದರ್ಶಪುರುಷ.

ಸ್ತ್ರೀ ಸ್ವಾತಂತ್ರ್ಯವನ್ನೂ ಗೌರವಿಸಿದ, ಪೂಜಾಸ್ವಾತಂತ್ರ್ಯವನ್ನು ತಂದುಕೊಟ್ಟ. 'ನನ್ನಕ್ಕನಿಗಿಲ್ಲದ ಉಪನಯನ ಸಂಸ್ಕಾರ ನನಗೇಕೆ?' ಎಂದು ಧರ್ಮ ಸಂಸ್ಕಾರವನ್ನೇ ಧಿಃಕರಿಸಿದ ಧೀಮಂತ. ಸ್ಥಾವರಗಟ್ಟಿದ್ದ ಜೀವನಕ್ಕೆ ಜಂಗಮ ಶಕ್ತಿಯನ್ನು ತುಂಬಿದ ಚೈತನ್ಯಶೀಲ. ದೇಹವನ್ನೇ ದೇವಾಲಯವಾಗಿ ಪರಿವರ್ತಿಸುವ ದೃಷ್ಟಿ ತಂದುಕೊಡುವುದರ ಮೂಲಕ ಇಂದು ನಡೆಯುತ್ತಿರುವ ಹಲವು ಹನ್ನೊಂದು ಧರ್ಮ ಸಂಘರ್ಷಗಳಿಗೆ ಸಮರ್ಥ ಪರಿಹಾರವನ್ನು ಇಷ್ಟಲಿಂಗ ಮಾಧ್ಯಮದ ಮೂಲಕ ಸಾಧಿಸಿದ ಪ್ರತಿಭಾಸಂಪನ್ನ, ಗುಣಸಂಪನ್ನ ದಯಾಮಯಿ.

"ಬಸವಾ ಎಂದೊಡೆ ಪಾಪ ಓಡುವುದು, ಪುಣ್ಯ ಅಡಸುವುದು".

ಓಂ



## ಶ್ರೀ ಸಿದ್ಧಲಿಂಗೇಶ್ವರ ವಚನ

ಬಸವಣ್ಣನ ಪ್ರಸಾದದಿಂದ ಭಕ್ತಿಜ್ಞಾನ ವೈರಾಗ್ಯ ಸಂಪನ್ನನಾದೆನಯ್ಯಾ
ಚೆನ್ನಬಸವಣ್ಣನ ಪ್ರಸಾದದಿಂದ ಷಟ್‌ಸ್ಥಲ ಜ್ಞಾನ ಸಂಪನ್ನನಾದೆನಯ್ಯಾ
ಪ್ರಭುದೇವರ ಪ್ರಸಾದದಿಂದ ಪರಶಿವತತ್ತ್ವಸ್ವರೂಪವೇ ಎನ್ನಸ್ವರೂಪವೆಂದರಿದು
ಸಮಸ್ತ ಸಂಸಾರ ಪ್ರಪಂಚ ಕೊಡಹಿದೆನು ನೋಡಾ
ನೀಲಲೋಚನೆಯಮ್ಮನ ಪ್ರಸಾದದಿಂದ ನಿಜಲಿಂಗೈಕ್ಯನಾದೆನಯ್ಯಾ
ಮಹಾದೇವಿಯಕ್ಕಗಳ ಪ್ರಸಾದದಿಂದ
ಸುತ್ತಿದ ಮಾಯಾಪಾಶವ ಹರಿದು ನಿರ್ಮಾಯನಾಗಿ
ನಿರ್ವಾಣಪದದಲ್ಲಿ ನಿಂದೆನಯ್ಯಾ
ಸಿದ್ಧರಾಮಯ್ಯನ ಪ್ರಸಾದದಿಂದ ಶುದ್ಧ ಶಿವತತ್ತ್ವವ ಪಡೆದೆನಯ್ಯಾ
ಮೋಳಿಗೆಯ ಮಾರತಂದೆಗಳ ಪ್ರಸಾದದಿಂದ
ಕಾಯದ ಕಳವನಳಿದು ಕರ್ಮನಿರ್ಮಲನಾಗಿ
ವೀರಮಾಹೇಶ್ವರನಾದೆನು ನೋಡಾ
ಇವರು ಮುಖ್ಯವಾದ ಏಳುನೂರೆಪ್ಪತ್ತನೆ ಮರಗಣಂಗಳ ಪರಮಪ್ರಸಾದದಿಂದ
ಎನ್ನಕರಣಂಗಳೆಲ್ಲವೂ ಲಿಂಗ ಕರಣಂಗಳಾಗಿ
ಕರಣೇಂದ್ರಿಯಗಳು ಕಳೆದುಳಿದು
ಇಂದ್ರಿಯಗಳಿಗೆ ನಿಲುಕದ ಸ್ಥಾನದಲ್ಲಿರ್ದು
ಪರಮಾನಂದಪ್ರಭಾಮಯನಾಗಿರ್ದೆನು ನೋಡಾ
ನಿಮ್ಮ ಶರಣರ ಪ್ರಸಾದದಿಂದ ನಾನು ಪ್ರಸಾದಿಯಾಗಿರ್ದೆನು ನೋಡಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ।

ಈ ವಚನವಲ್ಲಿ ಹಿಂದಿನ ಬಸವಾದಿ ಶರಣರು ನೀಲಲೋಚನೆ ಮುಂತಾದ ಶರಣೆಯರ ಘನವಾದ ವ್ಯಕ್ತಿತ್ವವನ್ನು ವ್ಯಕ್ತಗೊಳಿಸಲಾಗಿದೆ. ಹಾಗೂ ಅವರ ಪ್ರಸಾದದಿಂದ ತಾವೆಂತಹ ಉಚ್ಚ ಸ್ಥಿತಿಯನ್ನು ಪಡೆದವೆಂಬುದನ್ನು ತೋರಿಸಿ, ಲೌಕಿಕ ಜನರಿಗೆ ಮುಕ್ತಿಯ ಸದುಪಾಯವನ್ನು ತೋರಿಸಿಕೊಡಲಾಗಿದೆ.

(ಕೃಪೆ : ಷಟ್‌ಸ್ಥಲ ಜ್ಞಾನ ಸಾರಾಮೃತ - ಶ್ರೀ.ತೋಂ.ಸಿ.ಕೈಂ. ಸೇ. ಸಂಘ, ಎಡೆಯೂರು-ಗದಗ)





# ದಿವ್ಯಜೀವಿ-ಭವ್ಯಜೀವಿ

- ವಿಜಯ ಸಾಸನೂರು
ಖ್ಯಾತ ಸಾಹಿತಿಗಳು ಮತ್ತು
ವರಿಷ್ಠ ಪೋಲಿಸ್ ಅಧಿಕಾರಿ, ಬೆಂಗಳೂರು

ದಿನಾಂಕ ಆಗಸ್ಟ್ 13, 1994 ನನ್ನ ಜೀವನದಲ್ಲಿ ಒಂದು ಅವಿಸ್ಮರಣೀಯ ದಿನ ಎಂದು ತಿಳಿದಿರುವೆ. ಅಂದು ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಘನ ಸನ್ನಿಧಾನದಲ್ಲಿ ಕರ್ನಾಟಕ ಸರ್ಕಾರದ ಅಂದಿನ ಮುಖ್ಯ ಕಾರ್ಯದರ್ಶಿಗಳಾದ ಶ್ರೀ ಎಸ್.ಬಿ. ಮುದ್ದಪ್ಪನವರೊಡನೆ ಸಿದ್ಧಗಂಗೆಯ ವಿದ್ಯಾಸಂಸ್ಥೆಯ ವಿದ್ಯಾರ್ಥಿಗಳಿಗೆ ಉಪನ್ಯಾಸ ಮಾಡುವಂತಹ ಸೌಭಾಗ್ಯ ನನ್ನದಾಯಿತು. ಈ ಸಮಾರಂಭಕ್ಕೆ ಆಹ್ವಾನ ಬಂದಾಗ ನನಗೆ ಆಹ್ವಾನವನ್ನು ಸ್ವೀಕರಿಸಲು ಮೊದಲು ದಿಗಿಲಾಯಿತು. ಜೀವನದಲ್ಲಿ 46 ವಸಂತಗಳನ್ನು ಕಂಡರೂ ನಾನು ಇನ್ನೂ ವಿದ್ಯಾರ್ಥಿಯೇ ಎಂಬುದನ್ನು ಬಲವಾಗಿ ನಂಬಿದವನು. ಈಗಲೂ ಈ ನಂಬಿಕೆ ಇನ್ನೂ ಬಲವಾಗಿದೆ. ಹೀಗಿರುವಾಗ ಪೂಜ್ಯ ಶ್ರೀಗಳವರ ಸನ್ನಿಧಾನದಲ್ಲಿ ದಿನವೂ ಅವರಿಂದಲೇ ಅನುಭವ, ಅನುಭಾವಗಳ ಪಾಠವನ್ನು ಕಲಿಯುತ್ತಿರುವ ವಿದ್ಯಾರ್ಥಿಗಳಿಗೆ ನನ್ನಂತಹ ಅಲ್ಪಮತಿ ಉಪನ್ಯಾಸದ ಆಮಂತ್ರಣ ಒಪ್ಪಿಕೊಳ್ಳುವುದು ಒಂದು ರೀತಿಯ ಬೌದ್ಧಿಕ ಉದ್ಧಟತನ ಎಂದು ನನ್ನ ಭಾವನೆ. ಆದರೂ ಪೂಜ್ಯ ಶ್ರೀಗಳವರ ದರ್ಶನಲಾಭದ ಆಸೆಗೆ ಈ ಉದ್ಧಟತನ ತೋರಿಸುವ ದಾರ್ಷ್ಟ್ಯ ಮಾಡಿದೆ.

ಈ ಸಮಾರಂಭಕ್ಕೆ ಹೋಗುವ ಮೊದಲು ಬೆಂಗಳೂರಿನ ನನ್ನ ಗುರುಗಳಾದ ಪೂಜ್ಯ ಶ್ರೀ ಶ್ರೀ ಯಾಗಾಭಿನವ ನೃಸಿಂಹ ಭಾರತಿ ಸ್ವಾಮಿಗಳಲ್ಲಿ ಆಶೀರ್ವಾದ ಪಡೆಯಲು ಹೋದೆ. ನಾನು ಸಿದ್ಧಗಂಗೆಗೆ ಹೋಗುವುದನ್ನು ತಿಳಿದ ನಮ್ಮ ಸ್ವಾಮಿಗಳು "ನಾನು ಪೂರ್ವಾಶ್ರಮದಲ್ಲಿ ಪೂಜ್ಯ ಶಿವಕುಮಾರಸ್ವಾಮೀಜಿಯವರನ್ನು ಭೇಟಿಮಾಡಿದ ಸವಿನೆನಪು ಇನ್ನೂ ಹಚ್ಚಹಸುರಾಗಿದೆ. ಅವರೊಂದು ಅದ್ಭುತ ಜೀವಿ" ಎಂದರು.

ಸಿದ್ಧಗಂಗೆಯಲ್ಲಿ ಪೂಜ್ಯ ಸ್ವಾಮೀಜಿಯವರನ್ನು ಮೊದಲ ಬಾರಿ ದರ್ಶನ ಮಾಡಿದಾಗ ಮೊದಲನೆಯ ನೋಟದಲ್ಲಿಯೇ ಅವರ ಸಮಗ್ರ ವ್ಯಕ್ತಿತ್ವ ಅವರ ಕಾಂತಿಯುತ ದೃಷ್ಟಿಯಿಂದ ಚುಂಬಕದಂತೆ ನನ್ನನ್ನು ಸೆಳೆದಿದ್ದಿತು. ದಿವ್ಯಜೀವಿಗಳ ವ್ಯಕ್ತಿತ್ವದಿಂದ ಅಗೋಚರವಾದ ಶಕ್ತಿಯ ಪ್ರವಾಹವು ಹರಿಯುತ್ತಿರುವುದರಿಂದ ಅವರ **ಪಾದಗಳನ್ನು ಮುಟ್ಟಿದರೆ ಅದರಿಂದ ನಮಗೇ ಹಾನಿ ಎಂದು ನನ್ನ ಗುರುಗಳು ಹೇಳಿದ್ದು** ನಾನು ಸದಾ ಜ್ಞಾಪಿಸಿಕೊಳ್ಳುತ್ತೇನೆ. ಅವರು ಹೇಳುವಂತೆ ಪೂಜ್ಯರನ್ನು, ಅದರಲ್ಲಿಯೂ ಧರ್ಮಪೀಠಗಳನ್ನು ಅಲಂಕರಿಸಿದ ಮಹಾನುಭಾವನನ್ನು ವಂದಿಸುವ ಸರಿಯಾದ ಕ್ರಮ ಶಿರಸಾಷ್ಟಾಂಗ ನಮಸ್ಕಾರ ಮಾಡುವದು. ಆದರೆ ಅವರ ಪಾದಗಳನ್ನು ಮುಟ್ಟಕೂಡದು. ಈ ರೀತಿಯ ವಂದನೆಯಿಂದ ದಿವ್ಯಜೀವಿಗಳ ಪಾದದ ಬಳಿ ಮಸ್ತಕವನ್ನು ಇಟ್ಟ ಭಕ್ತ ತಲೆಯಲ್ಲಿ ಆ ದಿವ್ಯಜೀವಿಯ ವ್ಯಕ್ತಿತ್ವದ ಪ್ರಭೆ ಹರಿದುಬಂದು ಭಕ್ತನ ವ್ಯಕ್ತಿತ್ವದಲ್ಲಿ ಚೈತನ್ಯ ಮೂಡಿಸುವುದು. ದಿವ್ಯ ಜೀವಿಯ ಪಾದಗಳನ್ನು ಮುಟ್ಟುವುದರಿಂದ ತಿಳಿಗೇಡಿ ಭಕ್ತ ಹರಿದುಬರಬಹುದಾದ ದಿವ್ಯಪ್ರಭೆಯನ್ನು ತಾನೆ ತಡೆದಂತಾಗುತ್ತದೆ. ನನ್ನ ಗುರು ಅಪ್ಪಣೆ ಕೊಡಿಸಿದಂತೆ ಪೂಜ್ಯ ಶಿವಕುಮಾರ ಸ್ವಾಮೀಜಿಯವರ ಸಮಕ್ಷಮ ಅಡ್ಡಬಿದ್ದಾಗ ಅಂತಹ ಪ್ರಭೆ ಮೈಮನಗಳಲ್ಲಿ ಸಂಚರಿಸಿದಂತಾಗಿತ್ತು.

ಸಮಾರಂಭ ಪ್ರಾರಂಭವಾಯಿತು. ಐದು ಸಾವಿರ ವಿದ್ಯಾರ್ಥಿಗಳ ಒಕ್ಕೊರಲಿನ ಕಂಚಿನ ಕಂಠದಿಂದ ಸ್ಪಷ್ಟವಾದ, ಸ್ಫುಟವಾದ ಮಂತ್ರಪಠಣ. ಇದನ್ನು ಕೇಳಲು ಪ್ರಾಯಶಃ ಪ್ರತಿದಿನ ದೇವತೆಗಳು ಅಶರೀರರಾಗಿ ಸಿದ್ಧಗಂಗೆಯ ಧರೆಗೆ ಬಂದು ಇಳಿಯುತ್ತಿರಬಹುದೇನೋ. ಇದನ್ನು ಪೂಜ್ಯಶ್ರೀಗಳು ತಮ್ಮ ದಿವ್ಯದೃಷ್ಟಿಯಿಂದ ನೋಡುತ್ತಿರಲೂಬಹುದು. ಮಂತ್ರಪಠಣದ ನಂತರ ತನ್ನ ತೊದಲು ಭಾಷೆಯಲ್ಲಿ ನನ್ನ ಗುರುಗಳಿಂದ ನಾನು ಗ್ರಹಿಸಿದಷ್ಟು ಅನುಭಾವದ ಪಾಠವನ್ನು ಪೂಜ್ಯ ಶ್ರೀಗಳ ಸನ್ನಿಧಿಯಲ್ಲಿ ಹೋಮ್ ವರ್ಕ್ ಸಲ್ಲಿಸಿದ ಹಾಗೆ ಅರುಹಿದೆ. ಸ್ಥಿತಪ್ರಜ್ಞನ ಸನ್ನಿಧಿಯಲ್ಲಿ ಭಗವದ್ಗೀತೆಯ ಶ್ಲೋಕವಾದ **"ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್, ಆತ್ಮನ್ಯೇ ವಾತ್ಮನಾ ತುಷ್ಟ ಸ್ಥಿತ**

ಧೀರ್ಮುನಿರುಚ್ಯತೇ" ಹೇಳಿದ್ದೇ ಆಯಿತು. ಅದನ್ನು ಹೇಳುವಾಗ ಕಳ್ಳನೋಟದಲ್ಲಿ ಪೂಜ್ಯ ಶ್ರೀಗಳನ್ನು ನೋಡಿದೆ. ಅವರ ತುಟಿಗಳಲ್ಲಿ ಕಿರುನಗೆ ಮಿಂಚಿದ್ದಿತು. ಇದರರ್ಥ ನನ್ನ ಅನುಭಾವದ ಜೊತೆಗಿನ ಹುಂಬತನವನ್ನು ಅವರು ಕ್ಷಮಿಸಿದ್ದಾರೆ ಎಂದು ನಾನು ಭಾವಿಸಿದ್ದು.

ನನ್ನ ಉಪನ್ಯಾಸವನ್ನು ಶ್ರೀ ಮುದ್ದಪ್ಪನವರು ತಮ್ಮ ಭಾಷಣದಲ್ಲಿ ಬಹುವಾಗಿ ಮೆಚ್ಚಿಕೊಂಡು ಸರ್ಟಿಫಿಕೇಟ್ ಕೊಟ್ಟಿದ್ದೂ ಆಯಿತು. ತದನಂತರ ಪೂಜ್ಯ ಶ್ರೀಗಳು ಮಾತನಾಡಲು ನಿಂತಾಗ "ತಾವು ಕುಳಿತೇ ಮಾತನಾಡ ಬಹುದಲ್ಲಾ" ಎಂದು ನಾನು ಅವರ ಸ್ವಭಾವವನ್ನು ಅರಿಯದೆಯೇ ಬಿನ್ನವಿಸಿಕೊಂಡೆ. ಅವರು ನಕ್ಕು "ನಾನು ಯಾವಾಗಲೂ ನಿಂತುಕೊಂಡೇ ಮಾತನಾಡುವುದು" ಎಂದರು. ಬಳಿಕ ಭಗವದ್ಗೀತೆಯ ನನ್ನ ತೊದಲು ನುಡಿಗಳ ಅಡಿಪಾಯಕ್ಕೆ ತಮ್ಮ ದಿವ್ಯ ಅನುಭಾವದ ಎರಕವನ್ನು ಹೊಯ್ದು ಗಟ್ಟಿಯಾಗಿಸಿ ಅದರ ಮೇಲೆ ಅನುಭಾವದ ಬಹುಮಹಡಿಯ ಕಟ್ಟಡವನ್ನು ಕಟ್ಟಲು ಆರಂಭಿಸಿದರು. ಪೂಜ್ಯಶ್ರೀಗಳ ವಾಗ್‌ಝರಿ ನಿಂತಾಗ ಬಹುಶಃ ಈ ಕಟ್ಟಡ ಮೌಂಟ್ ಎವರೆಸ್ಟ್‌ದ ಎತ್ತರವನ್ನು ಮೀರಿಸಿದ್ದಿತು ಎಂದು ತೋರುವುದು. ತಮ್ಮ ಉಪನ್ಯಾಸದ ಉದ್ದಕ್ಕೂ ನನ್ನ ಮಾತಿನ ಎಳೆ ತೆಗೆದುಕೊಂಡು ಪೂಜ್ಯಶ್ರೀಗಳು ಪ್ರಸ್ತಾಪಿಸುತ್ತಿದ್ದುದ್ದು ನೋಡಿ ನನಗೆ ಹಿಂದೆಂದೂ ಆಗದಷ್ಟು ಸಂತೃಪ್ತಿ ಆಗಿದ್ದಿತು. ನನ್ನ ಜೀವನದಲ್ಲಿ ಇದಕ್ಕಿಂತಲೂ ಮಿಗಿಲಾದ ಸರ್ಟಿಫಿಕೇಟ್ ಮತ್ತಾರು ಕೊಡಬಹುದು?

ಪೂಜ್ಯಶ್ರೀಗಳಿಂದ ಆಶೀರ್ವಾದದ ಶ್ರೀರಕ್ಷೆ ಪಡೆದು ಮಾರನೆಯ ದಿನ ಮಧ್ಯಾಹ್ನ ಬೆಂಗಳೂರಿಗೆ ತಲುಪಿದಾಗ ದೆಹಲಿಯಿಂದ ನನಗೆ "ವಿಶಿಷ್ಟ ಸೇವೆಗಾಗಿ ಪೋಲೀಸ್ ಪದಕ" ಸಿಕ್ಕಿದ್ದು ಗೊತ್ತಾಯಿತು. ಇದು ಪೂಜ್ಯಶ್ರೀಗಳ ಅನುಗ್ರಹವಲ್ಲದೆ ಮತ್ತೇನು?

ಆರೇಳುನೂರು ವರ್ಷಗಳ ಐತಿಹಾಸಿಕ ಭವ್ಯ ಹಿನ್ನೆಲೆಯುಳ್ಳ ಸಿದ್ಧಗಂಗೆಯ ಕ್ಷೇತ್ರಕ್ಕೆ ಪೂಜ್ಯಶ್ರೀಗಳು ಕಳಶಪ್ರಾಯರಾಗಿದ್ದಾರೆ. ಅವರ ಧುರೀಣತ್ವದಲ್ಲಿ ಈ ಕ್ಷೇತ್ರ ಸಮಕಾಲೀನ ಸಾಮಾಜಿಕಪ್ರಜ್ಞೆಯ ಸಮರ್ಥ ಧರ್ಮಪೀಠವಾಗಿದೆ. ಸರಕಾರಿ ಸೇವೆಯಲ್ಲಿದ್ದುಕೊಂಡೂ ಮಹಾನ್ ಸಾಹಿತಿಯಾಗಿ ಪ್ರಜ್ವಲಿಸಿದ ಮತ್ತು ನಮ್ಮ ಒಡನಾಟದುದ್ದಕ್ಕೂ ಸಾಹಿತ್ಯದ ರಾಜಮಾರ್ಗದಲ್ಲಿ ನನಗೆ ಸದಾ ಮಾರ್ಗದರ್ಶನ ಮಾಡಿದ ದಿವಂಗತ ಡಾ. ಸಿದ್ದಯ್ಯ ಪುರಾಣಿಕ್‌ರವರು ಪೂಜ್ಯ ಶ್ರೀಗಳವರ ಬಗ್ಗೆ ನುಡಿದಿದ್ದನ್ನು ಇಲ್ಲಿ ಸ್ಮರಿಸದೇ ಇರಲಾರೆ. "ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳೂ ತ್ರಿವಿಧ ದಾಸೋಹಮೂರ್ತಿಗಳೂ, ಮಹಾಮಹಿಮರೂ ಆದ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ನಿಲುವನ್ನು ಆ ಸಿದ್ಧಲಿಂಗೇಶ್ವರನೇ ಬಲ್ಲನಲ್ಲದೆ ನಮ್ಮಂಥವರು ಬಲ್ಲೆವೆಂದು ಸೊಲ್ಲಿಸಲಾದೀತೆ! ಮಾತು ಸೋತು ಶರಣಾಗತವಾಗುತ್ತದೆ ಶ್ರೀಗಳವರ ಸನ್ನಿಧಿಯಲ್ಲಿ! ಮಾತಿಗೆ ಮೀರಿದ ವ್ಯಕ್ತಿತ್ವ ಅವರದು. ಈ ಸರ್ವಾಂಗಲಿಂಗಿಯಲ್ಲಿ ಯಾವುದನ್ನು ಮೆಚ್ಚುವುದೆಂದು ದಿಗ್ಭ್ರಮೆಯಾಗುತ್ತದೆ. ನಿಶ್ಚಿತ ಜ್ಞಾನವನ್ನೇ! ನಿರ್ಮಲ ಕ್ರಿಯೆಯನ್ನೇ! ಉಜ್ವಲ ವೈರಾಗ್ಯವನ್ನೇ! ಶಮ ದಮಾದಿ ದೈವೀಸಂಪತ್ತನ್ನೇ! ಬಹುಭಾಷಾ ಪಾರಂಗತಿಯನ್ನೇ! ಪವಿತ್ರ ಜೀವನವನ್ನೇ! ಸಕಲ ಜೀವರಾಶಿಗಳನ್ನೂ ತನ್ನ ತೆಕ್ಕೆಯಲ್ಲಿ ಒಳಗೊಳ್ಳುವ ಅಪಾರ ಅನುಕಂಪವನ್ನೇ! ಬೆಕ್ಕಸ ಬೆರಗುಗೊಳಿಸುವ ಶಿಕ್ಷಣ ಸಂಸ್ಥೆಗಳ ಸಂಸ್ಥಾಪನೆಯನ್ನೇ! ಪಂಡಿತ ಪಾಮರರಿಬ್ಬರನ್ನೂ ಏಕಪ್ರಕಾರವಾಗಿ ಮೆಚ್ಚಿಸುವ ಮಾತುಗಾರಿಕೆಯನ್ನೇ! ವೈಜ್ಞಾನಿಕ ದೃಷ್ಟಿಯನ್ನೇ! ಆಧ್ಯಾತ್ಮಿಕ ಔನ್ನತ್ಯವನ್ನೇ! ಸ್ವಧರ್ಮನಿಷ್ಠೆ ಪರಧರ್ಮ ಸಹಿಷ್ಣುತೆಗಳನ್ನೇ! ಕವಿ ಕಲಾವಿದ ವಿದ್ವಾಂಸರಿಗೆ ನಿರಂತರ ನೀಡುತ್ತಿರುವ ಆಶ್ರಯವನ್ನೇ! ಸಾಹಿತ್ಯ ಸಂಸ್ಕೃತಿಗಳ ಪೋಷಣೆಯನ್ನೇ! ಸಂಘಟನಾ ಶಕ್ತಿಯನ್ನೇ, ಶಿವಮಂತ್ರ ಸಿದ್ಧಿಯನ್ನೇ, ಎಷ್ಟು ಜನರು ಬಂದು ಬೇಡಿ ಕಾಡಿದರೂ, ಎಂಥ ವಿಘ್ನಗಳು ಎದುರಾದರೂ ಎಳ್ಳಷ್ಟೂ ಬೇಸರ, ಮುನಿಸು, ದಣಿವುಗಳನ್ನು ತೋರದ ಸದಾ ಸುಪ್ರಸನ್ನವದನವನ್ನೇ, ಬಹುವಿಷಯ ಪರಿಣತಿಯನ್ನೇ! ಜಗಳಗಳನ್ನು ಬಗೆಹರಿಸುವ ವ್ಯವಹಾರ ಕುಶಲತೆಯನ್ನೇ! ದಿನದಿನವೂ ಎಣಿಕೆಯಿಲ್ಲದಂತೆ ಬರುವ ಭಕ್ತರ ವೈಯಕ್ತಿಕ ಸಮಸ್ಯೆಗಳಿಂದ ಆರಂಭಿಸಿ ದಾಸೋಹ, ವಿದ್ಯಾರ್ಥಿನಿಲಯ, ಶಾಲೆ ಕಾಲೇಜುಗಳ ಜಟಿಲ ಸಮಸ್ಯೆಗಳು ಎಲ್ಲವನ್ನೂ ಲೀಲಾಜಾಲವಾಗಿ ಪರಿಹರಿಸುವ ಪರಮಾದ್ಭುತವನ್ನೇ! ಉದ್ಧರಣೆಗಳನ್ನು ಬರೆಯುವುದರಿಂದ ಸರ್ವೋದ್ಧಾರದ ಸಮಗ್ರ ಪ್ರಯೋಜನಗಳವರೆಗೆ ಸರ್ವ ಕಾರ್ಯಗಳಲ್ಲಿಯೂ ಒಡಮೂಡುವ ಕಾಯಕ ನಿಷ್ಠೆಯನ್ನೇ! ಗಡಿಯಾರವೂ ನಾಚಿಕೊಳ್ಳುವಂತಹ ಅಗಾಧವಾದ, ಅವರ್ಣನೀಯವಾದ ವ್ಯಕ್ತಿತ್ವದ ಎಲ್ಲ ಅಂಶಗಳನ್ನೂ ಗುರುತಿಸಿ ಆಲೋಚಿಸಿದನಿತೂ ಅಪಾರವಾಗಿ ತೋರುವ ಈ ಆಧ್ಯಾತ್ಮ





ಸೂರ್ಯರ ಅವುಗಳ ಒಟ್ಟು ಬೆಲೆಯನ್ನು ಕಟ್ಟಬಲ್ಲವರಾರು!"

ಶಿಕ್ಷಣ ಸುಸಂಸ್ಕೃತ ಜನಾಂಗ ನಿರ್ಮಾಣದ ಮೂಲ ಬಂಡವಾಳ. ದೀನದಲಿತರಾದ, ಅನಾಥರಾದ, ನಾಡಿನ ಎಲ್ಲಾ ಭಾಗದ ಎಲ್ಲ ಕೋಮಿನ ವಿದ್ಯಾರ್ಥಿಗಳ ವೈವಿಧ್ಯಮಯ ಶಿಕ್ಷಣಕ್ಕೆ ಸಮಾನಾವಕಾಶವನ್ನು ಕಲ್ಪಿಸಿಕೊಟ್ಟಿರುವ ಶ್ರೀ ಸಿದ್ಧಗಂಗಾ ಗುರುಕುಲವು ರಾಷ್ಟ್ರೀಯ ಹಾಗೂ ಧಾರ್ಮಿಕ ಐಕ್ಯತೆಗಳ ಸಂಕೇತವಾಗಿ ಇಡೀ ದೇಶಕ್ಕೆ ಮಾದರಿಯಾಗಿದೆ. ಇಲ್ಲಿ ನಡೆಯುವ ದಾಸೋಹದ ಬಗ್ಗೆ ಸಾಕಷ್ಟು ಜನ ಪ್ರಶಂಸೆ ಮಾಡಿದ್ದಾರೆ. ಆದರೆ ಈ ಪ್ರಶಂಸಕರು ನೋಡಿದ್ದು ಕೇವಲ ಹೊಟ್ಟೆ ತುಂಬಲು ಅನ್ನವನ್ನು ಕೊಡುವ ದಾಸೋಹ. ಆದರೆ ಅದಕ್ಕೂ ಮಹತ್ತರವಾದದ್ದು ಪೂಜ್ಯ ಶ್ರೀಗಳು ಆಂತರಿಕ ವ್ಯಕ್ತಿತ್ವದ ಹಸಿವನ್ನು ಇಂಗಿಸಲು ಸುರಿಯುತ್ತಿರುವ ಅನುಭಾವದ ಅಮೃತಧಾರೆ. ಇದನ್ನು ಪಡೆದುಕೊಂಡೇ ಬೆಳೆದು ಅಪೂರ್ವ ಸಾಧನೆ ಮಾಡಿದ ಶ್ರೀಗಳ ಅಸಂಖ್ಯಾತ ಕಾರುಣ್ಯ ಶಿಶುಗಳಲ್ಲಿ ನಾನು ಪ್ರಾಸಂಗಿಕವಾಗಿ ಪ್ರಸ್ತಾವಿಸಬಯಸುವ ಎರಡು ಹೆಸರುಗಳು - ಕನ್ನಡದ ಖ್ಯಾತ ಕವಿಗಳಲ್ಲಿ ಒಬ್ಬರಾದ ಡಾ. ಜಿ.ಎಸ್. ಶಿವರುದ್ರಪ್ಪ ಮತ್ತು ದಕ್ಷ ಪೋಲೀಸ್ ಅಧಿಕಾರಿಯೆಂದು ದೇಶದಲ್ಲೇ ಹೆಸರು ಪಡೆದ ಇಂದಿನ ಬೆಂಗಳೂರು ನಗರದ ಪೋಲೀಸ್ ಕಮೀಷನರ್ ಶ್ರೀ ಎಲ್. ರೇವಣಸಿದ್ಧಯ್ಯನವರು. ಶ್ರೀ ಶಿವರುದ್ರಪ್ಪನವರು "ಪ್ರಕೃತಿಯಂತೆ ಕವಿಯ ಮನಸು ವಿಪುಲರೂಪಧಾರಿಣಿ, ಬೊಮ್ಮನೆದೆಯ ಕನಸಿನಂತೆ ಕೋಟಿಕಲ್ಪಗಾಮಿನಿ" ಎಂದು ಬರೆಯುವ ಶಕ್ತಿಯನ್ನು ದಯಪಾಲಿಸಿದವರು ಪೂಜ್ಯ ಶ್ರೀಗಳು. ಹಾಗೆಯೇ ಶ್ರೀ ರೇವಣಸಿದ್ಧಯ್ಯನವರ ದೃಷ್ಟಿಯಲ್ಲಿ ಶ್ರೀಗಳು "ಭೂಮಿಗಿಳಿದು ಬಂದ ಭಗವಂತ. ಈ ದಿವ್ಯ ಜೀವಿ ಆರು ದಶಕಗಳಿಂದ ಸದ್ದುಗದ್ದಲವಿಲ್ಲದೆ ಪವಾಡ ಮಾಡುತ್ತಿರುವ ಪರಿ ವರ್ಣಿಸಲು ಅಸಾಧ್ಯ" ಎಂದಿದ್ದಾರೆ ರೇವಣಸಿದ್ಧಯ್ಯನವರು.

ಕಾಯಕ ಮತ್ತು ದಾಸೋಹ ತತ್ವಗಳು ಶರಣರು ಜಗತ್ತಿಗೆ ಕೊಟ್ಟ ಅಮೂಲ್ಯ ಸಂಪತ್ತು. ಜಂಗಮಶೀಲವಾದ ಈ ತತ್ವಗಳ ಆಚರಣೆ ಶ್ರೀಗಳ ನಿತ್ಯಪೂಜೆ. ಅವರ ದೀರ್ಘ ಜೀವನವನ್ನೂ ವ್ಯಾಪಿಸಿಕೊಂಡಿರುವ ಈ ಅನುಪಮ ಕಾಯಕ ದಾಸೋಹಗಳು ಆಧುನಿಕಜೀವನಕ್ಕೆ ತಾರಕ ಮಂತ್ರಗಳು. ಪೂಜ್ಯ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು ಹೇಳಿದಂತೆ "ಕಲ್ಯಾಣ ಕ್ರಾಂತಿಯ ನಂತರ ಪ್ರಭುದೇವರ ಆಧ್ಯಾತ್ಮ ಬಸವಣ್ಣನವರ ದಾಸೋಹ, ಚನ್ನಬಸವಣ್ಣನವರ ಜ್ಞಾನ, ಶಿವಶರಣರ ಕಾಯಕಗಳಿಗೆ ಶ್ರೀ ಸ್ವಾಮಿಗಳವರು ಅಪೂರ್ವ ಸಂಗಮ". ಈ ಸಂಗಮಕ್ಕೆ ನಾನೂ ನನ್ನ ನಮ್ರ ಅಭಿಪ್ರಾಯವನ್ನು ಸೇರಿಸಲು ಅಪ್ಪಣೆಯಾದರೆ ಪೂಜ್ಯಶ್ರೀಗಳು ಸಿದ್ಧರಾಮನಂತೆ ಕರ್ಮಯೋಗಿ. ಹಾಗೆಯೇ ಪುರಂದರದಾಸ, ಕನಕದಾಸ, ಸರ್ವಜ್ಞ ಇತ್ಯಾದಿ ಅನುಭಾವಿಗಳ ಪ್ರತಿಬಿಂಬ. ಪೂಜ್ಯ ಶ್ರೀ ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ಹೇಳಿದಂತೆ "ಸಿದ್ಧಗಂಗೆಯ ಮೂರ್ತಿ ಸಿದ್ಧಗಂಗೆಯ ಜ್ಯೋತಿ. ಸಿದ್ಧ ಸುಕುಮಾರ ಬೆಳಗಿಸಿಹನು ನಾಡಿನಲಿ ಶುದ್ಧ ಸಂಸ್ಕೃತಿಯ ಪೂರ್ಣಜ್ಞ".

ಆಧ್ಯಾತ್ಮಿಕ ಅನುಭವದ ವಿಕಾಸವೇ ಷಟ್ಸ್ಥಲಕ್ಕೆ ತಳಹದಿ. ಒಳಗಿನ ಹೊರ ರೂಪ ತಾಳಿರುವ ಸಂಕೇತವೇ ಅಷ್ಟಾವರಣ. ನೈತಿಕ ನಿರೂಪಣೆಯ ವ್ಯಾಪಕ ಸ್ವರೂಪವೇ ಪಂಚಾಚಾರ. ಇವೆಲ್ಲವುಗಳನ್ನೂ ಪೂಜ್ಯ ಶ್ರೀಗಳ ವ್ಯಕ್ತಿತ್ವದಲ್ಲಿ ನೋಡಬಹುದಾಗಿದೆ. ಪ್ರಬಲವಾದ ಆತ್ಮಶಕ್ತಿಯಿಂದ ಪರಿಸರದೊಡನೆ ಹೋರಾಡಿ ತಮ್ಮ ಯುಗದ ಮನೋಧರ್ಮ ಪರಿವರ್ತಿಸಿದ ಪೂಜ್ಯಶ್ರೀಗಳ ಕಾರ್ಯಕ್ಷೇತ್ರ ವೈವಿಧ್ಯಮಯ ವಾದದ್ದು. ಇಂತಹ ವಿರಕ್ತ ಚಕ್ರವರ್ತಿಗೆ ಲೌಕಿಕ ಜಗತ್ತಿನ ವಿಶ್ವವಿದ್ಯಾಲಯ ಡಾಕ್ಟರೇಟ್ ಪದವಿ ಕೊಡುವುದು ಆ ವಿಶ್ವವಿದ್ಯಾಲಯ ತನ್ನನ್ನು ತಾನೇ ಗೌರವಿಸಿಕೊಂಡಂತೆ. ಪೂಜ್ಯ ಶ್ರೀಗಳು ತಾವೇ ಒಂದು ಅತಿ ದೊಡ್ಡ ವಿಶ್ವವಿದ್ಯಾಲಯ. ಅವರಿಗೆ ನಿಜವಾದ ಸರ್ಟಿಫಿಕೇಟ್ ಕೊಡಲು ಶಕ್ತನಾದವನು ದಯಾಮಯನಾದ ಭಗವಂತನೊಬ್ಬನೇ.

ವ್ಯಕ್ತಿತ್ವದ ಪೂರ್ಣ ವಿಕಾಸ ಶಿವಯೋಗದ ಗುರಿ. ಈ ಸಂದರ್ಭದಲ್ಲಿ ನೆನಪಾಗುವ ವಚನ "ಭಕ್ತಿಯೆಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ ಲಿಂಗವೆಂಬ ಎಲೆಯಾಯಿತ್ತು. ಲಿಂಗವೆಂಬ ಎಲೆಯ ಮೇಲೆ ವಿಚಾರವೆಂಬ ಹೂವಾಯ್ತು. ಆಚಾರವೆಂಬ ಕಾಯಾಯ್ತು. ನಿಷ್ಪತ್ತಿಯೆಂಬ ಹಣ್ಣಾಯ್ತು....". ಪೂಜ್ಯ ಶ್ರೀಗಳಿಗೆ 90 ವರ್ಷ ತುಂಬಿದ ಸಂದರ್ಭದಲ್ಲಿ ನಾನು ಆ ಭಗವಂತನಲ್ಲಿ ಕೇಳಿಕೊಳ್ಳುವುದು ಏನೆಂದರೆ "ಪೂಜ್ಯ ಶ್ರೀಗಳನ್ನು ಚಿರಂಜೀವಿಯಾಗಿಸು. ಕಲಿಯುಗದಲ್ಲಿ ಈ ದಿವ್ಯ ಜೀವಿಯ ಅವಶ್ಯಕತೆ ಎಂದಿಗಿಂತಲೂ ಹೆಚ್ಚಾಗಿದೆ. ಪೂಜ್ಯ ಶ್ರೀಗಳಿಗಾಗಿ ನನ್ನ ಉಳಿದ ಆಯುಸ್ಸನ್ನು ಕೊಡಲು ನಾನಂತೂ ಸದಾ ಸಿದ್ಧ".

(ಕೃಪೆ : ತೊಂಬತ್ತರ ತಪಸ್ವಿ)

# "ಪುರಾಣ" ಮತ್ತು "ಕಾವ್ಯ" - ಬಸವಣ್ಣನ ಬಗ್ಗೆ

- ಡಾ. ಎಂ. ಚಿದಾನಂದಮೂರ್ತಿ
ಖ್ಯಾತ ಸಂಶೋಧನಕಾರ, ಬೆಂಗಳೂರು.

**'ಪು**ರಾಣ' ಎಂಬ ಮಾತಿಗೆ ಪ್ರಾಚೀನವಾದುದು, ಹಳೆಯದು ಎಂಬ ಅರ್ಥವಿದೆ. ಎಂದೋ ಆಗಿಹೋದ ಸಂಗತಿಗಳನ್ನು ನಿರೂಪಿಸುವುದು ಪುರಾಣಕೃತಿ ಅರ್ಥಾತ್ ಪುರಾಣ. ಪುರಾಣಕಾರರ ದೃಷ್ಟಿ ಯಾವಾಗಲೂ ಹಿಂದಿನದರ ಕಡೆ ಇರುತ್ತದೆ ಎಂಬುದು ಇದರಿಂದ ಸೂಚಿತವಾಗುತ್ತದೆ.

ಸಂಸ್ಕೃತದಲ್ಲಿ ಪುರಾಣ ಸಾಹಿತ್ಯ ಅಪಾರವಾಗಿದೆ. ಸುಪ್ರಸಿದ್ಧ ಮಹಾಪುರಾಣಗಳು ಮತ್ತು ಉಪ-ಪುರಾಣಗಳಲ್ಲದೆ, ಸಾವಿರಾರು ಪುರಾಣಗಳ ಕೃತಿಗಳು ಅಲ್ಲಿ ಹುಟ್ಟಿವೆ. ಅವುಗಳಲ್ಲಿ ಬರುವ ಸಂಗತಿಗಳ ವೈವಿಧ್ಯ, ನಿರೂಪಣೆಯಲ್ಲಿ ಏಕಮುಖತೆಯಿಲ್ಲದಿರುವುದು, ಕಲ್ಪಿತ ಸಂಗತಿಗಳ ಆಧಿಕ್ಯ, ಕಾಲಕಾಲಕ್ಕೆ ಪುರಾಣಗಳು ಬೆಳೆದು ಬಂದಿರುವುದು ಇತ್ಯಾದಿ ಕಾರಣಗಳಿಂದಾಗಿ ಪುರಾಣ ಸಾಹಿತ್ಯ ಮೊದಮೊದಲು ವಿದ್ವಾಂಸರ ಗಮನವನ್ನು ಸೆಳೆಯಲಿಲ್ಲ. ಈಚೆಗೆ ಅವುಗಳ ಮಹತ್ವವನ್ನು ವಿದ್ವಾಂಸರು ಮನಗಾಣುತ್ತಿದ್ದಾರೆ. ಅವುಗಳ ಕ್ರಮಬದ್ಧವಾದ ಅಧ್ಯಯನ ಭಾರತೀಯ ಸಂಸ್ಕೃತಿಯನ್ನು ತಿಳಿಸಿಕೊಡುತ್ತದೆ; ಇದಕ್ಕೆ ನಿದರ್ಶನವಾಗಿ Cultural History from the Vayupurana ಎಂಬ ಗ್ರಂಥವನ್ನು ನೋಡಬಹುದು.

ಪುರಾಣವನ್ನು (myth) 'ಪ್ರಾಚೀನರ ಭಾಷೆ' ಎಂದು ಕರೆಯುವುದುಂಟು. ಜಗತ್ತು ಮತ್ತು ಜೀವನಗಳನ್ನು ಕತೆ ಸಾದೃಶ್ಯ ಸಾಮತಿಗಳ ಮೂಲಕ ಅರ್ಥಮಾಡಿಕೊಳ್ಳುವ ಪ್ರಯತ್ನ ಅಲ್ಲಿ ಕಾಣುತ್ತದೆ. ಒಬ್ಬ ವ್ಯಕ್ತಿ ಅಲ್ಲಿ ಪ್ರಧಾನವಾಗಿರಬಹುದು ಅಥವಾ ಇಲ್ಲದಿರಬಹುದು. ವ್ಯಕ್ತಿ ಪ್ರಧಾನವಾಗಿದ್ದರೂ, ಅವನೊಬ್ಬನನ್ನೇ ಕೇಂದ್ರ ವ್ಯಕ್ತಿಯಾಗಿ ಮಾಡಿಕೊಂಡು, ಎಲ್ಲ ಗಮನವನ್ನೂ ಅವನತ್ತ ಕೇಂದ್ರೀಕರಿಸಿ ಚಿತ್ರಿಸುವುದು ಪುರಾಣಗಳಲ್ಲಿ ಅಪೂರ್ವ. ವ್ಯಕ್ತಿಯ (ವ್ಯಕ್ತಿಗಳ ಜೊತೆ) ಒಂದು ಇಡೀ ಪರಂಪರೆಯನ್ನು ಪುರಾಣ ಕೊಡುತ್ತದೆ. ಸಮಗ್ರತೆ ಅದರ ಪ್ರಧಾನ ಲಕ್ಷಣ. ಆದ್ದರಿಂದಲೇ ಸಂಸ್ಕೃತ ಪುರಾಣಗಳಲ್ಲಿ ಸೃಷ್ಟಿಪೂರ್ವ ಸ್ಥಿತಿ, ಸೃಷ್ಟಿ ಕರ್ಮ, ದೇವಾನುದೇವತೆಗಳ ಕತೆ, ಭೂಲೋಕದಲ್ಲಿ ಆಳಿದ ರಾಜರು, ಅವರ ವಂಶ, ಸ್ಥಳಪುರಾಣಗಳು, ಶಿಲ್ಪ, ಕಾವ್ಯ ಮೀಮಾಂಸೆ, ವಾಸ್ತು, ಮತಗಳು ಇತ್ಯಾದಿ ಇತ್ಯಾದಿ ಎಷ್ಟೆಷ್ಟೋ ಸಂಗತಿಗಳು ಬರುತ್ತವೆ. ಇಡೀ ಜಗತ್ತನ್ನು ಸಮಗ್ರವಾಗಿ ನೋಡುವ ದೃಷ್ಟಿ ಪುರಾಣಗಳದು. ಇಲ್ಲಿ ಸಂಕ್ಷಿಪ್ತವಾಗಿ, ಸಾರವತ್ತಾಗಿ ಹೇಳುವುದೆಂಬುದಿಲ್ಲ. ಎಲ್ಲವನ್ನೂ ವಿವರಿಸಬೇಕು. ಆದಷ್ಟು ಹೆಚ್ಚು ವಿವರಗಳಿರಬೇಕು ಎಂಬುದೇ ಪ್ರಧಾನ ದೃಷ್ಟಿ. ಪುರಾಣದ ಮಧ್ಯೆ ಈಚಿನವರು ಯಾರೋ ಒಂದು ಕತೆಯನ್ನು ಸೇರಿಸಿದರೆ ಅದು ನಿರಾಕರಣೀಯವೇನೂ ಅಲ್ಲ. ಪುರಾಣಗಳು ಕಾಲದಿಂದ ಕಾಲಕ್ಕೆ ಬೆಳೆದುಬಂದ ರೀತಿ ಹೀಗೆ. ಪ್ರಸಿದ್ಧ ಪುರಾಣಗಳ ಕರ್ತೃತ್ವವನ್ನು ವ್ಯಾಸರಿಗೇ ಆರೋಪಿಸಿದ್ದರೂ, ಅವುಗಳ ಅಜ್ಞಾತ ಲೇಖಕಕೃತ ಎಂದೇ ತೆಗೆದುಕೊಳ್ಳಬೇಕಾಗುತ್ತದೆ. ಪುರಾಣಗಳು ಒಬ್ಬನ ಸೃಷ್ಟಿಯಲ್ಲ; ಹಲವರ ಸೃಷ್ಟಿ; ಅವು ಎಲ್ಲರಿಗೂ ಸೇರಿದಂಥವು ಎಂಬ ಭಾವನೆಯೇ ಮೊದಲಿಂದ ರೂಢವಾಗಿದೆ. ಸಂಸ್ಕೃತ ಪುರಾಣಗಳು ಸಂಸ್ಕೃತ ಭಾಷೆಯಲ್ಲಿದ್ದರೂ ಅವುಗಳು ಒಂದು ರೀತಿಯಲ್ಲಿ ಜಾನಪದವೂ ಹೌದು ಎಂಬುದನ್ನಿಲ್ಲಿ ಸ್ಮರಿಸಿಕೊಳ್ಳಬಹುದು. ವೇದಗಳಿಗೆ ಅನಧಿಕಾರಿಗಳಾದಸ್ತ್ರೀ, ಶೂದ್ರರ ಬೋಧನೆಗಾಗಿ ಪುರಾಣಗಳು ರಚಿತವಾಗಿವೆ ಎಂಬ ಮಾತು ಅರ್ಥಪೂರ್ಣವಾದುದು. ಪುರಾಣಗಳು ಮುಖ್ಯವಾಗಿ ವಿದ್ವಾಂಸರಿಗಲ್ಲ, ಸಾಮಾನ್ಯ ಜನತೆಗಾಗಿ.

ಮೇಲಿನ ಕೆಲ ಸಂಗತಿಗಳ ಹಿನ್ನೆಲೆಯಲ್ಲಿ, ಕನ್ನಡದ ಎರಡು ಕೃತಿಗಳನ್ನು ಇಲ್ಲಿ ಪರಿಶೀಲಿಸುತ್ತೇನೆ. ಅವೆರಡರ ವಸ್ತುವೂ ಒಂದೇ; ಬಸವಣ್ಣನವರು. ಆದರೆ ಆ ಎರಡು ಕೃತಿಗಳಲ್ಲಿ ಮೂಲಭೂತವಾದ ದೃಷ್ಟಿಭೇದವಿದೆ. ಅದು ಈ ಪ್ರಬಂಧದ ಮುಖ್ಯ ವಸ್ತು.

ಬಸವಣ್ಣನವರಿಗೆ ಸಂಬಂಧಿಸಿದಂತೆ ಸು. 1200-1230ರ ಸುಮಾರಿನಲ್ಲಿದ್ದ ಹರಿಹರ 'ಬಸವರಾಜದೇವರ ರಗಳೆ'ಯನ್ನು ಬರೆದ. ಬಹುಶಃ ಅವನಾದ ಬಳಿಕ, ಅದೇ ಶತಮಾನದಲ್ಲಿದ್ದ ಪಾಲ್ಕುರಿಕೆ ಸೋಮನಾಥ ತೆಲುಗಿನಲ್ಲಿ 'ಬಸವ ಪುರಾಣಮು' ಎಂಬ ಕೃತಿಯನ್ನು ರಚಿಸಿದ. ಇದನ್ನು ಭೀಮಕವಿ ಕ್ರಿ.ಶ. 1369ರಲ್ಲಿ 'ಬಸವಪುರಾಣ' ಎಂಬ ಹೆಸರಿನಲ್ಲಿ ಕನ್ನಡಕ್ಕೆ ಅನುವಾದಿಸಿದ. ಈ ಅನುವಾದ ಬಹುಮಟ್ಟಿಗೆ ಮೂಲವನ್ನೇ ಅನುಸರಿಸಿರುವುದರಿಂದ ಭೀಮಕವಿಯ ಕಾವ್ಯದ ಬಗ್ಗೆ ಹೇಳಿದ್ದೆಲ್ಲ ಪಾಲ್ಕುರಿಕೆ ಸೋಮನಿಗೆ ಅನ್ವಯವಾಗುತ್ತದೆ.





ಹರಿಹರನದು ಮುಖ್ಯವಾಗಿ ಕಾವ್ಯದೃಷ್ಟಿ; ಅವನ ಕೃತಿಯ ಹೆಸರೇ ಹೇಳುವಂತೆ 'ಬಸವರಾಜದೇವ'ನ ಬಗ್ಗೆ ಬರೆದಿರುವ ರಗಳೆಯ ರೂಪದ ಕಾವ್ಯ ಅವನದು. 'ರಾಜ' ಎಂಬುದನ್ನು ಗಮನಿಸಬೇಕು; ಬಿಜ್ಜಳನಂತೆಯೇ ಇವನೂ ರಾಜ. ಬಿಜ್ಜಳ ಲೌಕಿಕ ರಾಜ. ಬಸವಣ್ಣ ಆಧ್ಯಾತ್ಮಿಕ ರಾಜ ಮತ್ತು ಬಿಜ್ಜಳನಿಗಿಂತ ಒಂದು ಕೈ ಮಿಗಿಲು ಎಂಬುದು ಸ್ಪಷ್ಟವಾಗಿ ಧ್ವನಿತವಾಗುತ್ತದೆ. ಕಾವ್ಯದಲ್ಲಿಯೂ ಬಸವತಾನು ಬಿಜ್ಜಳನ ಕೈಕೆಳಗಿನ ಮಂತ್ರಿಯಾಗಿದ್ದರೂ ಅವನಿಗೆ ತಾನು ಸರಿಸಾಮನನಂತೆ ನಡೆದುಕೊಳ್ಳುವ ರೀತಿಯಲ್ಲಿಯೇ ಚಿತ್ರಿತನಾಗಿದ್ದಾನೆ. ಅವನೇ ಇಲ್ಲಿಯ ಕೇಂದ್ರವ್ಯಕ್ತಿ; ಎಲ್ಲ ಘಟನೆಗಳಿಗೂ ಅವನು ಒಂದಲ್ಲ ಒಂದು ರೀತಿ ಸಂಬಂಧಿಸಿದ್ದಾನೆ. ಅವನು ಬರೆದ ಅಧ್ಯಾಯವಿಲ್ಲ. ಕತೆಯಿಲ್ಲ. ಕವಿಯ ಗಮನ ಬಸವನನ್ನು ಬಿಟ್ಟು ಅತ್ತ ಇತ್ತ ಸರಿಯುವುದಿಲ್ಲ. ಆದ್ದರಿಂದ ಹರಿಹರನ ಕೃತಿ ಏಕಮುಖ ಉದ್ದೇಶವುಳ್ಳ ಕಾವ್ಯವಾಗಿ ತೋರುತ್ತದೆ. ಇಲ್ಲಿ ಇತರ ಪಾತ್ರಗಳು ಬಂದರೂ ಅವು ಬಸವನಿಗೆ ಸಂಬಂಧಿಸಿದಂತೆ ಮಾತ್ರ ಕಾಣಿಸಿಕೊಳ್ಳಲು ಸಾಧ್ಯ.

ಭೀಮಕವಿಯ (ಪಾಲ್ಕುರಿಕೆ ಸೋಮನ) 'ಬಸವಪುರಾಣ' ('ಬಸವಪುರಾಣಮು') ಹೆಸರೇ ಹೇಳುವಂತೆ ಪುರಾಣ. ಬಸವಣ್ಣ ಈ ಕೃತಿಯ ಪ್ರಮುಖ ವ್ಯಕ್ತಿಯೇ. ಆದರೆ ಕೃತಿಕಾರನದು ಪ್ರಮುಖವಾಗಿ ಪುರಾಣದೃಷ್ಟಿ. ಬಸವನನ್ನು ಒಂದು ಮಹಾ ಪರಂಪರೆಯ ಅಂಗವಾಗಿ ಸಮಗ್ರವಾಗಿ ನೋಡಲು ಕೃತಿಕಾರ ಬಯಸುತ್ತಾನೆ. ಇಲ್ಲಿ ಇತರ ಅನೇಕ ಐತಿಹಾಸಿಕ ವ್ಯಕ್ತಿಗಳ ಕತೆಗಳಿವೆ. ಇಲ್ಲಿ ಪೌರಾಣಿಕವಾದ ಕೋಳೂರು ಕೊಡಗೂಸಿನ, ಬೇಡರ ಕಣ್ಣಪ್ಪನ ಕತೆಗೆ ಮತ್ತು ಅಂತಹ ಇತರ ಕತೆಗಳಿಗೂ ಸ್ಥಾನವಿದೆ. ಅವರೆಲ್ಲರೂ ಭಕ್ತರು ಮತ್ತು ಬಸವ ಅವರ ಪರಂಪರೆಗೆ ಸೇರಿದವನು. ಅವರ ಕತೆ ಅವನ ರಕ್ತಗತವಾಗಿದೆ; ಅವರ ಆದರ್ಶಗಳು ಅವನನ್ನು ರೂಪಿಸಿವೆ. ಬಸವನ ಜೀವನ ರೂಪಿತವಾಗಲು ಹಿಂದಿನ ಪರಂಪರೆಯಂತೆಯೇ ಅವನ ಸಮಕಾಲೀನ ಘಟನೆಗಳೂ ವ್ಯಕ್ತಿಗಳೂ ಮುಖ್ಯರು ತಾನೆ; 'ಬಸವಪುರಾಣ'ವನ್ನು ಓದಿದರೆ ಒಂದು ಸಮಗ್ರ ಪರಂಪರೆಯ ಪರಿಚಯವಾಗುತ್ತದೆ. ಅದರ ಜನಪ್ರಿಯತೆಗೆ ಇದೂ ಒಂದು ಕಾರಣವೆಂಬುದನ್ನು ಮರೆಯಬಾರದು.

ಹರಿಹರನ ಬಸವರಾಜದೇವರ ರಗಳೆಯ ಕತೆ ಇತಿಹಾಸವಲ್ಲದಿದ್ದರೂ ಕಾಲ ಮತ್ತು ರೀತಿಗಳೆರಡರ ದೃಷ್ಟಿಯಿಂದಲೂ ಇತಿಹಾಸಕ್ಕೆ ಸಮೀಪ. ಬಸವನ ಬಗ್ಗೆ ಆಸಕ್ತರಾದ ಆಧುನಿಕರಿಗೆ ಆ ಕಾರಣದಿಂದಲೇ ಆ ಕೃತಿ ಪ್ರಿಯವಾಗುವುದು (ಹೀಗೆ ಪ್ರಿಯವಾಗಲು ಅದರ ಕಾವ್ಯಗುಣವೂ ಕಾರಣ). ಅದು ಓದಿ ಸಂತೋಷ ಪಡಬಹುದಾದ ಕಾವ್ಯ. ಆದರೆ 'ಬಸವಪುರಾಣ' ಓದಿಸಿ ಕೇಳಿ ಭಕ್ತಿಭಾವ ಭರಿತವಾಗಲು ಅರ್ಹವಾದ ಪುರಾಣ. ಅದರ ಭಿತ್ತಿ ವಿಶಾಲ. ಇಲ್ಲಿ ಕತೆಗಳು ಹೆಚ್ಚು; ಎಷ್ಟೋ ಕತೆಗಳಲ್ಲಿ ಬಸವನ ಮಾತೇ ಬರುವುದಿಲ್ಲ; ಬಸವನಿಗೂ ಆ ಕತೆಗೂ ಪ್ರತ್ಯಕ್ಷ ಸಂಬಂಧವೇ ಇಲ್ಲ. ಆ ಕತೆಗಳನ್ನು ಓದಿ ವ್ಯಾಖ್ಯಾನಿಸುವವರು ಮಧ್ಯೆ ಮಧ್ಯೆ ವಿವರಿಸಲಿಕ್ಕೆ, ಬೇರೆ ಕತೆಗಳನ್ನು ಸೇರಿಸಿ ವಿವರಿಸಲಿಕ್ಕೆ ಅವಕಾಶವಿದೆ. ಸಾಮಾನ್ಯ ಜನತೆಗೆ ಇದು ಪ್ರಿಯವಾಗುತ್ತದೆ. ದಿನದಿನವೂ ಸ್ವಲ್ಪ ಕೇಳುತ್ತ ಅಲ್ಲಿಯ ಭಕ್ತರ ಕತೆಗಳನ್ನು ಮೆಲುಕುಹಾಕುತ್ತ ಆ ಭಕ್ತರಿಗೆಲ್ಲ ನಾಯಕಮಣಿಯಂತಿರುವ ಬಸವನ ಕತೆಯನ್ನು ಪರಿಚಯ ಮಾಡಿಕೊಳ್ಳುತ್ತಾರೆ. ಕೃತಿಯ ಕಾವ್ಯಗುಣ ಇಲ್ಲಿ ಅಮುಖ್ಯವಾಗುತ್ತದೆ. ಅದರ ಪುರಾಣತ್ವ ಪ್ರಧಾನವಾಗುತ್ತದೆ, ಜನಗಳ ದೃಷ್ಟಿಯಲ್ಲಿ ಪುರಾಣಕರ್ತನಿಗೆ ಬಸವ ಒಂದು ಕಾಲ. ದೇಶಕ್ಕೆ ಬದ್ಧನಾದ ವ್ಯಕ್ತಿಯಾಗದೆ, ಅವನು ತತ್ವಶಃ ಯಾವ ಕಾಲಕ್ಕಾದರೂ ಸೇರಬಹುದಾದ ಒಂದು ಮಾದರಿಯಾಗುತ್ತಾನೆ. ಎಲ್ಲಾ ಕಾಲದ ಒಂದು ಆದರ್ಶವಾಗುತ್ತಾನೆ. ಅವನು ಬಿಜ್ಜಳನ ಕಾಲದಲ್ಲಿದ್ದುದರಿಂದ ಬಿಜ್ಜಳನ ಹೆಸರು ಬರುವುದು ಅನಿವಾರ್ಯ. ಸಾಮಾನ್ಯ ಜನತೆಗೂ ಇತಿಹಾಸದಲ್ಲಿ ಆಸಕ್ತಿ ಅಷ್ಟಕ್ಕಷ್ಟೆ! ಬಸವನ ಹಿರಿಮೆ, ಮಹತ್ಕಾರ್ಯ, ಪವಾಡ ಇವೇ ಅವರಿಗೆ ಇತಿಹಾಸ ಮತ್ತು ಮುಖ್ಯ. ಅವನು ಯಾವ ಕಾಲದಲ್ಲಿದ್ದ ಎಂಬುದು ಮುಖ್ಯ. ಬಸವ ಯಾವ ಪರಂಪರೆಯ ಅಂಗವಾಗಿ, ಹೇಗೆ ಬದುಕಿದ ಎಂಬುದರ ಸಾರ ಅವರಿಗೆ ದೊರಕಿದರೆ ಸಾಕು; ಇತಿಹಾಸವನ್ನು ಕಟ್ಟಿಕೊಂಡು ಅವರಿಗೇನು! "ಕಾವ್ಯ", "ಪುರಾಣ"ಗಳ ಕಲ್ಪನೆಯ ವ್ಯತ್ಯಾಸದ ಹಿನ್ನೆಲೆಯಲ್ಲಿ ಹರಿಹರ ಮತ್ತು ಭೀಮಕವಿಯ (ಅರ್ಥಾತ್ ಪಾಲ್ಕುರಿಕೆ ಸೋಮನ) ಕೃತಿಗಳನ್ನು ಪರಿಶೀಲಿಸಿದಾಗ, ಪುರಾಣಸೃಷ್ಟಿಯು ಕಾವ್ಯದೃಷ್ಟಿಗಿಂತ ಕನಿಷ್ಠವಾದದ್ದೆಂದು ಭಾವಿಸುವ ಅಗತ್ಯವೇನೂ ತೋರುವುದಿಲ್ಲ. ಕಾವ್ಯ, ಪುರಾಣಗಳ ದೃಷ್ಟಿಯಿಂದ ನೋಡಿದಾಗ, ಹರಿಹರ, ಭೀಮಕವಿಗಳ ಕೃತಿಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಸಹಾಯಕವಾಗುತ್ತದೆಂಬುದನ್ನು ಸೂಚಿಸುವುದು ಈ ಚಿಕ್ಕ ಲೇಖನದ ಉದ್ದೇಶ.

●

# "ಜಾನಪದ ರತ್ನ" ಶ್ರೀ ಕೆ.ಆರ್. ಲಿಂಗಪ್ಪ

ಜನಪದ ಸಾಹಿತ್ಯಕ್ಕೆ ಹಾಡಿನ ಮೂಲಕ ಜೀವವನ್ನು ತುಂಬುತ್ತ, ನಾಡಿನಾದ್ಯಂತ ಜನಪದ ಸಾಹಿತ್ಯವನ್ನು ಪ್ರಚಾರ ಮಾಡಿದ ಗಾಯಕರಲ್ಲಿ ಶ್ರೀ ಕೆ.ಆರ್. ಲಿಂಗಪ್ಪನವರು ಒಬ್ಬರು. ಇವರು ವಕೀಲರು, ಪ್ರವೃತ್ತಿಯಲ್ಲಿ ಜನಪದ ಹಾಡುಗಾರರಾಗಿದ್ದರು. ಶ್ರೀ ಕೆ.ಆರ್. ಲಿಂಗಪ್ಪನವರು ಚಿಕ್ಕಮಗಳೂರು ಜಿಲ್ಲೆಯ ತರೀಕೆರ ತಾಲ್ಲೂಕಿನ ಕಲ್ಲೇನಹಳ್ಳಿಯವರು. ಹೆತ್ತವರ ಪ್ರೀತಿಯ ಮಗನಾಗಿ ಬೆಳೆದ ಶ್ರೀ ಲಿಂಗಪ್ಪನವರು ಜಾನಪದ ಹಾಡುಗಾರಿಕೆಗೆ ಮನಸೋತರು. ಜನಪದ ಗೀತೆ, ಲಾವಣಿ ಪದಗಳ ಗೀಳು ಹಚ್ಚಿಕೊಂಡಿದ್ದ ಲಿಂಗಪ್ಪ ತಾಯಿಯಪ್ರೇರಣೆಯಿಂದ ಜಾನಪದ ಜಗತ್ತನ್ನು ಪ್ರವೇಶಿಸುವಂತಾಯಿತು. ಜನಪದ ಗೀತೆಗಳನ್ನು ತನ್ನ ಇಂಪಾದ ಕಂಠದಿಂದ ಸೊಗಸಾಗಿ ಹಾಡುತ್ತಿದ್ದರು. ಹಾಗೂ ಜನಪದ ಗೀತೆಗಳಿಗೆ ಸುಂದರ ವ್ಯಾಖ್ಯಾನ ನೀಡುವ ವಿಶೇಷ ಶಕ್ತಿಯನ್ನು ಬೆಳೆಸಿಕೊಂಡಿದ್ದರು. ಕನ್ನಡನಾಡಿನಾದ್ಯಂತ ಸುತ್ತಾಡಿ ಜನಪದ ಸಾಹಿತ್ಯದ ಬಗ್ಗೆ ಸಾವಿರಾರು ಸಭೆ ಸಮಾರಂಭಗಳಲ್ಲಿ ಜಾನಪದ ಸಾಹಿತ್ಯ ಕುರಿತು ಭಾಷಣಗಳನ್ನು ಮಾಡಿದ್ದಾರೆ.

ಶ್ರೀ ಕೆ.ಆರ್. ಲಿಂಗಪ್ಪನವರು ಕರ್ನಾಟಕಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಸದಸ್ಯರಾಗಿ ಕಾರ್ಯನಿರ್ವಹಿಸಿದ್ದಾರೆ. 1967ರಲ್ಲಿ ತರೀಕೆರೆಯಲ್ಲಿ ನಡೆದ ಪ್ರಥಮ ಜಾನಪದ ಸಮ್ಮೇಳನದ ಪ್ರಧಾನ ಕಾರ್ಯದರ್ಶಿಯಾಗಿ ಕೆಲಸ ಮಾಡಿದ್ದಾರೆ. ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದ ಲಿಂಗಪ್ಪನವರು ಸ್ವಾತಂತ್ರ್ಯ ಹೋರಾಟಗಾರರೂ ಆಗಿದ್ದರು. ಅವರು ಭಾರತ ಸ್ವಾತಂತ್ರ್ಯಕ್ಕೆ ಐವತ್ತು ವರ್ಷಗಳು ತುಂಬಿದ ಸವಿನೆನಪಿಗಾಗಿ ದೆಹಲಿಯಲ್ಲಿ ನಡೆದ ರಾಷ್ಟ್ರೀಯ ಜಾಥಾ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಅಮೇರಿಕಾದಲ್ಲಿ ಪ್ರವಾಸ ಮಾಡಿದ್ದ ಕೆ.ಆರ್. ಲಿಂಗಪ್ಪನವರು ತಮ್ಮ ಕೋಗಿಲೆ ಕಂಠದಿಂದ ನಾಡಿನ ಹಾಗೂ ಹೊರನಾಡ ಕನ್ನಡಿಗರ ಮನಗೆದ್ದಿದ್ದರು. ಬರಹವನ್ನು ರೂಢಿಸಿಕೊಂಡಿದ್ದ ಅವರು ಮಾನವಮಿ ಪದಗಳು ಮತ್ತು ಜಾನಪದ ಗೀತಗಳು ಗ್ರಂಥಗಳನ್ನು ಪ್ರಕಟಿಸಿದ್ದಾರೆ.

ಕೆ.ಆರ್. ಲಿಂಗಪ್ಪನವರಿಗೆ ಕರ್ನಾಟಕ ಸರ್ಕಾರ ಕನ್ನಡ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿತ್ತು. ಜಾನಪದ ಸಾಹಿತ್ಯರತ್ನ, ಸಾಹಿತ್ಯಭಾಸ್ಕರ ಪ್ರಶಸ್ತಿ ಅವರಿಗೆ ಲಭಿಸಿದ್ದವು. ಹಾಗೂ ಮಲೆನಾಡುರತ್ನ ಪ್ರಶಸ್ತಿ ಸೇರಿದಂತೆ ನಾಡಿನ ಅನೇಕ ಬಿರುದುಗಳಿಗೆ ಪಾತ್ರರಾಗಿದ್ದರು.

- ಹೆಚ್. ಸತೀಶ

## ಶ್ರದ್ಧಾಂಜಲಿ

ತಮ್ಮ ಸುಮಧುರ ಕಂಠದಿಂದ ನಾಡಿನ ಮನೆಮಾತಾಗಿದ್ದ ಕೆ.ಆರ್. ಲಿಂಗಪ್ಪನವರು ಜನಪದ ಸಾಹಿತ್ಯದಲ್ಲಿ ಅಪಾರವಾದ ಪಾಂಡಿತ್ಯವನ್ನು ಹೊಂದಿದ್ದರು. ಜಾನಪದ ಮೂಲ ಧಾಟಿಯಲ್ಲಿ ಜನಪದ ಹಾಡುಗಳನ್ನು ಹಾಡುವುದರ ಮೂಲಕ ಜನಪದ ಸಂಸ್ಕೃತಿಯನ್ನು ನಾಡಿನ ಮೂಲೆ ಮೂಲೆಗೂ ಬಿತ್ತರಿಸುವ ಕೈಂಕರ್ಯದಲ್ಲಿ ತಮ್ಮನ್ನ ತೊಡಗಿಸಿಕೊಂಡಿದ್ದರು.

1967ರಲ್ಲಿ ತರೀಕೆರೆಯಲ್ಲಿ ಮೊಟ್ಟಮೊದಲ ಬಾರಿಗೆ ಪ್ರಥಮ ಬೃಹತ್ ಸಮ್ಮೇಳನದ ನೇತೃತ್ವ ವಹಿಸಿ ಜಾನಪದ ಇತಿಹಾಸದಲ್ಲಿ ಒಂದು ಮೈಲಿಗಲ್ಲಾಗುವಂತೆ ಮಾಡುವಲ್ಲಿ ಅವರು ವಹಿಸಿದ ಪಾತ್ರ ಸ್ಮರಣೀಯ. ಅವರ ಜಾನಪದ ಪ್ರತಿಭೆಯನ್ನು ಗುರುತಿಸಿ ಹಲವಾರು ಸಂಘ-ಸಂಸ್ಥೆಗಳು, ಮಠ-ಮಾನ್ಯಗಳು ಪ್ರಶಸ್ತಿಗಳನ್ನು ನೀಡಿ ಗೌರವಿಸಿದ್ದವು. ಇಂಥಹ ಪ್ರತಿಭಾವಂತರಾದ ಕೆ.ಆರ್. ಲಿಂಗಪ್ಪನವರು ಇದೇ ಮೇ 12 ರಂದು ನಾಡಿನ ಸಮಸ್ತ ಜನತೆಯನ್ನು ಅಗಲಿದುದು ನಾಡಿಗೆ ಹಾಗೂ ಜಾನಪದ ಕ್ಷೇತ್ರಕ್ಕೆ ತುಂಬಲಾರದ ನಷ್ಟ. ಇವರ ನಿಧನಕ್ಕೆ "ಸಿದ್ಧಗಂಗಾ" ಪತ್ರಿಕಾ ಬಳಗ ಅಶ್ರುತರ್ಪಣವನ್ನು ನೀಡುತ್ತದೆ. ಅವರ ಆತ್ಮಕ್ಕೆ ದಯಾಮಯನಾದ ಭಗವಂತನು ಶಾಂತಿಯನ್ನು ಹಾಗೂ ಅವರ ಅಗಲಿಕೆಯ ದುಃಖವನ್ನು ಅವರ ಕುಟುಂಬ ವರ್ಗದವರು ಸಹಿಸುವ ಶಕ್ತಿಯನ್ನು ನೀಡಲಿ ಎಂದು ಪ್ರಾರ್ಥಿಸುತ್ತದೆ.





# ಮಹಾಮಾನವ ಬಸವಣ್ಣ

- ಅಣ್ಣಪ್ಪ ಮಟ್ಟೀಕಲ್ಲಿ, ಬೆಳಗಾವಿ.

ಓರ್ವ ವ್ಯಕ್ತಿಯ ಭಾವಚಿತ್ರವನ್ನು ಯು.ಎಸ್.ಎ.ದ ಪಾರ್ಲಿಮೆಂಟಿನ ಸಭಾಂಗಣದಲ್ಲಿ ಅನಾವರಣ ಗೊಳಿಸಬೇಕಾದರೆ ಒಂದು ಕರಾರು ಉಂಟೆಂದು ತಿಳಿದುರುತ್ತದೆ. ಜನರಬಾಯಲ್ಲಿ ಯಾವ ವ್ಯಕ್ತಿ ಉಳಿಯುವನೋ ಅವನ ಭಾವಚಿತ್ರಕ್ಕೆ ಆ ಸಭಾಂಗಣದಲ್ಲಿ ಮಾನ್ಯತೆ ದೊರತು, ಅವನಿಗೆ ಅಲ್ಲಿ ಸ್ಥಾನವು ಲಭ್ಯವಾಗುವುದು. ಈ ದೃಷ್ಟಿಯಿಂದ ನಮ್ಮ ದೇಶ ವಿಚಿತ್ರವಾದುದು. ಶತಮಾನ ಅಷ್ಟೇ ಅಲ್ಲ. ಶತಮಾನಗಳುದ್ದಕ್ಕೂ ಜನಮನದ ಮಗ್ಗುಲಲ್ಲಿಯೇ ಪವಡಿಸಿದ ವ್ಯಕ್ತಿಗೆ ಭಾರತ ಒಕ್ಕೂಟವಷ್ಟೇ ಏಕೆ, ರಾಜ್ಯ ವಿಧಾನಸಭಾಂಗಣದಲ್ಲಿಯೂ ಸ್ಥಾನ ದೊರೆಯುವುದಿಲ್ಲ. ಹೀಗೆ ಇಂದಿನ ನಮಗಾಗಿ, ನಮ್ಮ ಅಸ್ತಿತ್ವದ ಇರವಿಗಾಗಿ ಭದ್ರಬುನಾದಿಯನ್ನು ಹಾಕಿಕೊಟ್ಟ ಹಳೆಯ ತಲೆಮಾರಿನ ಸಮ್ಮ ಪೂರ್ವಜರನ್ನು ನೆನಪು ಇಡಲಾರದಷ್ಟು ಕೃತಜ್ಞತೆ ನಮ್ಮನ್ನು ಆವರಿಸಿದೆ. ಒಂದು ವೇಳೆ ನೆನಪಿಸಿಕೊಂಡರೂ ಕೇವಲ ತುಟಿ ಸಹಾನುಭೂತಿಯ ನೆನಹು ಮಾತ್ರ. ಆ ಮಹಾಮಾನವರು, ಮಹಾತ್ಮರು ಬದುಕಿದ ತತ್ವಗಳಿಗೆ ತಿಲಾಂಜಲಿ ಇತ್ತು, ಅವರ ಹೆಸರು ಹಾಗೂ ಅವರ ಬದುಕನ್ನೇ ಮಾರಾಟಗೊಳ್ಳುವ ವಸ್ತುವಾಗಿ ಪರಿವರ್ತಿಸಿ, ಅದರಿಂದ ಸಾಕಷ್ಟು ಹಣ-ಹಸರು ಮಾಡಿಕೊಳ್ಳುವ ಪ್ರವೃತ್ತಿಯನ್ನು ಆಳವಾಗಿ ಬೇರೂರಿಸಿಕೊಂಡು, ಅಂತವರ ವ್ಯಕ್ತಿತ್ವದ ಉಸಿರೇ ಉಡುಗಿಹೋಗುವಂತೆ ಶೋಷಣೆಯನ್ನು ಯಶಸ್ವಿಯಾಗಿ ಬಳಸಿಕೊಂಡು, ನಮ್ಮ ಜೀವನದ ಪಾವನತೆಯನ್ನು ಹೆಮ್ಮೆಯಿಂದ ಹಸರಿಸಿಕೊಳ್ಳುತ್ತಿರುವ ಸಮಾಜ ನಮ್ಮದು.

ಶೋಷಣೆ-ಭ್ರಷ್ಟಾಚಾರಗಳಿಂದಲೇ ಬದುಕುತ್ತಿರುವ ನಮಗೆ ಆ ಮಹಾನ್ ವ್ಯಕ್ತಿಗಳ ಅರಿವು ಉಂಟಾಗುವುದು ಹೇಗೆ? ಜೊತೆಗೆ ಮಾನವನ ಬುದ್ಧಿಮತ್ತೆಯ ವಿಕಾಸ, ಅದರಿಂದಾಗಿ ವಿಚಾರದ ಹಾಗೂ ವಿಜ್ಞಾನದ ಮುನ್ನಡೆಗಳು ಮಾನವ ಜೀವನವನ್ನು ಸುಲಭೀಕರಿಸಿದ, ಸರಳೀಕರಿಸಿದ ಇಂದಿನ ಪರಿಸರದಲ್ಲಿ ಅವರ ನೆನಪಿನ ಕಿಡಿಯನ್ನು ಹೊತ್ತಿಸಿ, ಆ ಕಿಡಿಯನ್ನು ನಮ್ಮಲ್ಲಿ ಪ್ರಜ್ವಲಿಸಿಕೊಂಡು ನಮ್ಮ ಜೀವನಕ್ಕೆ ಅದನ್ನೊಂದು ದಾರಿದೀಪವನ್ನಾಗಿಸಿ, ಸಕಲ ಜೀವಾತ್ಮರಿಗೂ ಲೇಸನೇ ಬಯಸುವ ದಾರಿಯನ್ನು ಕಂಡುಕೊಳ್ಳುವ ಬಗೆ ಏನು? ಈ ದಿಸೆಯಲ್ಲಿ ನಮ್ಮ ವಿಚಾರ ಲಹರಿಯನ್ನು ಹರಿಬಿಟ್ಟಂತೆ ನಿರಾಸೆಯ ನಿಟ್ಟುಸಿರು ಹೊರಹೊಮ್ಮುತ್ತದೆ. ನಿರಾಶೆಯ ಬದುಕು ಸಾವಿಗೆ ನಾಂದಿ. ಅದುವೇ ಕಾರಣ ನಿರಾಶೆಯನ್ನು ದೂರೀಕರಿಸಲು ಆಗೀಗ ಅಂತಹ ಮಹಾನುಭಾವರನ್ನು ನೆನೆದು ಕೃತಕೃತ್ಯರಾಗಬೇಕೆಂಬ ಕೆಲವರಾದರೂ ಸಮಾಲೋಚಿಸಿ, ಕೆಲ ಕಾರ್ಯಗಳನ್ನು ಹಮ್ಮಿಕೊಳ್ಳುವುದನ್ನು ಆಗೀಗ ಕಾಣುತ್ತೇವೆ. ಇದೊಂದೇ ಅಲ್ಪತೃಪ್ತಿಯನ್ನು ನೀಡುವ ಪರಿ. ಇದನ್ನೂ ಬಿಟ್ಟರೆ, ಯಾವುದೂ ಇಲ್ಲವಾದಿತೆಂಬ ಅಳುಕು! ಈ ಅಳುಕಿನ ಹಿನ್ನೆಲೆಯಲ್ಲಿ ಇದೊಂದು ವೈಚಾರಿಕ ವಿಶ್ಲೇಷಣೆ.

ತನ್ನನ್ನು ತಾನರಿತುಕೊಂಡು, ಇತರರೂ ತಮ್ಮನ್ನರಿತುಕೊಂಡು ಬಾಳುವಂತೆ ಮಾಡಿದವರೇ 'ಮಹಾ-ಆತ್ಮರು'. ತನ್ನನ್ನು ತಾನರಿತವ ಇತರರಿಗೆಂದಿಗೂ ಮಾರಕನಾಗಲಾರ. ಏಕೆಂದರೆ ಈ ಅರಿವು ತನ್ನಂತೆ ಪರರೆಂಬುದನ್ನು ತಿಳಿಪಡಿಸುವರಲ್ಲಿ ಮಹೋನ್ನತ ಪಾತ್ರವನ್ನಾಡುತ್ತದೆ. ಆ ಅರಿವುಂಟಾದವನೇ ಸಿದ್ಧಪುರುಷ. ಆ ಅರಿವುಂಟಾಗುವವರೆಗೆ ಅವನು ಸಾಧಕ. ಆತ್ಮವಿಶ್ವಾಸವನ್ನು ಅಚಲಗೊಳಿಸುವಲ್ಲಿ ಮಾನವನಿರಿಸಬೇಕಾದ ಇದೊಂದು ದಿಟ್ಟ ಹೆಜ್ಜೆ. ತನ್ನ ನಂಬಲಾರದವ ಪರರನು ನಂಬ. ತನ್ನಲ್ಲಿ ನಂಬುಗೆಯಿಲ್ಲದವ ಬೇರೆಲ್ಲಿಯೇ ನಂಬುಗೆಗಾಗಿ ಶೋಧಿಸತೊಡಗುವನು. ಈ ನಂಬುಗೆಯ ಶೋಧನೆಯೇ ಮಾನವನು ನಿರ್ಮಿಸಿದ ಅನೇಕ ಸಂಸ್ಥೆಗಳ ಅಸ್ತಿತ್ವಕ್ಕೆ ಕಾರಣ. ದೇವರು-ಧರ್ಮ-ಆಧ್ಯಾತ್ಮ ಮುಂತಾದ ಎಲ್ಲ ಸಂಸ್ಥೆಗಳೂ ಈ ಆತ್ಮವಿಶ್ವಾಸದ ಕೊರತೆಯ ಪ್ರತೀಕ. ಈ ಕೊರತೆಯ ನಿವೇದನೆಯನ್ನು ನಾಗರಿಕತೆಯ ವಿಕಾಸದುದ್ದಕ್ಕೂ ಕಾಣಬಹುದು. ನಾಗರಿಕತೆಯು ಮಾನವ ಭೌತಿಕ ಸಾಧನೆಗಳ ದಾಖಲೆಯೆಂದು ಪರಿಗಣಿಸಿದರೆ, 'ಸಂಸ್ಕೃತಿ' ಮಾನವನ ಭೌತಿಕೇತರ ಸಾಧನೆ-ಅಂದರೆ ಆತ್ಮವಿಶ್ವಾಸವನ್ನು ಬೇರೂರಿಸಿಕೊಳ್ಳುವಿಕೆ.

ಸಾಮಾನ್ಯವಾಗಿ ಈ ಆತ್ಮವಿಶ್ವಾಸವು ಕುದುರಿ, ಗಟ್ಟಿಗೊಂಡು ಚಿರಸ್ಥಾಯಿ ಆಯಿತೆಂದರೆ ವ್ಯಷ್ಟಿಯು ಸಮಷ್ಟಿರೂಪು ತಾಳುತ್ತದೆ. ವ್ಯಷ್ಟಿಯು ಸಮಷ್ಟಿಯಾಗಿ ಪರಿವರ್ತನೆ ಹೊಂದಿದ ಪಡೆದವರು, ಪಡುವವರು ಮಾನವಕುಲಕೋಟಿಯಲ್ಲಿ ತೀರ ವಿರಳ. ಇಂತಹ ವಿರಳರಲ್ಲಿ ವಿರಳರಾಗಿದ್ದ ಬಸವಣ್ಣ, ಅಂತೆಯೇ

ಎಂಟು ಶತಮಾನಗಳು ಉರುಳಿದರೂ ಅವನ ಹೆಸರು ಇನ್ನೂ ಉಳಿದುಕೊಂಡಿದೆ.

ಡೋಲಾಯಮಾನವಾದ ಈ ವೈಚಾರಿಕ ತೊಳಲಾಟದಲ್ಲಿ ಆಯ್ಕೆಯು ವ್ಯಕ್ತಿಗತವಾಗುವುದೆಂದರೂ, ಸಾಮಾಜಿಕ ಪರಿಸರವು ಹೆಚ್ಚು ವಿಷಪೂರಿತವಾಗುವ ಮುನ್ನವೇ ವ್ಯಕ್ತಿಗತ ಮಾರ್ಗವು ಉದ್ದೀಪನಗೊಂಡು, ಸಾಮಾಜಿಕ ವಿಷಪೂರಿತ ಪರಿಸರವನ್ನು ತಿಳಿಗೊಳಿಸಿ, ಶುದ್ಧೀಕರಣಗೊಳಿಸಲು ಸರಿಯಾದ ವೈಚಾರಿಕ ಚಿಂತನೆ ವಿಶ್ಲೇಷಣೆಗಳಿಗೆ ಅನಿವಾರ್ಯವಾಗಿ ಅಂಟಿಕೊಳ್ಳಲೇಬೇಕು. ಈ ಪ್ರಜ್ಞೆಯು ಜನಸಾಮಾನ್ಯರಲ್ಲಿ ಮೂಡಬೇಕು; ಈ ತಿಳುವಳಿಕೆಯನ್ನು ಮೂಡಿಸಬೇಕು. ಅಂತೆಯೇ ಇಂದಿನ ಪರಿಸರದ ದೃಷ್ಟಿಕೋನದಿಂದ, ಅಳತೆಗೋಲಿನಿಂದ, ಅಂತಹವರ, ತಾತ್ವಿಕ ಬದುಕನ್ನು ಆವಿಷ್ಕಾರಗೊಳಿಸಿ ಕೊಳ್ಳಬೇಕಾಗುತ್ತದೆ. ತಾತ್ವಿಕ ಆವಿಷ್ಕಾರಗಳು ಸಾತ್ವಿಕತೆಯನ್ನು ಮೂಡಿಸಬಲ್ಲವು. ತಾತ್ವಿಕತೆ-ಸಾತ್ವಿಕತೆಗಳ ಸಾಕಾರರೂಪವಾಗಿ ನಿಂತಿದ್ದ ನಮ್ಮವನೇ ಆದ ಬಸವಣ್ಣನ ಬಗೆಗೆ, ಮಾನವನು 'ಶರಣ'ನಾದ ರೀತಿ, ಮಾನವ ಮಾನವಾತೀತನಾದ ಪರಿಯನ್ನು ತಿಳಿದರೆ ಕೃತಕೃತ್ಯರಾದೇವು!

ಮಾನವ ಕುಲದ ಇತಿಹಾಸದ ಪುಟಗಳನ್ನು ತಿರುವಿದರೆ ಒಂದು ಕಠೋರ ಸತ್ಯವು ವಿದಿತವಾಗುತ್ತದೆ. ಯಾವ ಮಹಾಮಾನವನೂ ಯಾವುದೇ 'ಧರ್ಮ'ದ ಸ್ಥಾಪನೆಯನ್ನು ಮಾಡಲಿಲ್ಲ, ಯಾವುದೇ ಧರ್ಮದ ಮೊರೆ ಹೋಗಲಿಲ್ಲ, ಇಲ್ಲವೆ ಅವನಿಗಿಂತ ಮೊದಲೇ ಅಸ್ತಿತ್ವದಲ್ಲಿದ್ದ ಧರ್ಮವನ್ನು ಖಂಡಿಸಲಿಲ್ಲ. ಈ ದೃಷ್ಟಿಯಿಂದ ಇತಿಹಾಸದುದ್ದಕ್ಕೂ ಹೆಸರಿಸಬಹುದಾದ ಯಾವ ವ್ಯಕ್ತಿಯನ್ನೂ ಒಂದು ನಿಶ್ಚಿತ ಧರ್ಮ, ಇಲ್ಲವೆ ತಲೆಕಟ್ಟನ್ನು ಧರಿಸಿದ 'ಧರ್ಮ'ವೆಂಬ ಸಂಕೋಲೆಯಲ್ಲಿ ಬಂಧಿಸಿಡುವುದು ತಪ್ಪಾದೀತು; ಅವರನ್ನು ಸಣ್ಣವರನ್ನಾಗಿ ಮಾಡಿದಂತಾದೀತು! 'ಧರ್ಮ'ವೆಂದರೆ ಒಂದು ತತ್ವ. ಮಾನವ ಬದುಕನ್ನು ಸುಗಮಗೊಳಿಸಬಹುದಾದ ತತ್ವವೇ ಧರ್ಮ. ಮಾನವನನ್ನು ಉದ್ದೀಪನಗೊಳಿಸಿ, ಅವನಲ್ಲಿರುವ ಮಹಾಚೇತನದ ಮರಿಯು ಜಾಗೃತಗೊಂಡು, ತನ್ನತನವನ್ನು ಅರಿತುಕೊಳ್ಳುವಂತೆ ಮಾಡುವುದೇ ಧರ್ಮ ಇಲ್ಲವೆ ತತ್ವ. ಮಾನವ ಕುಲದ ವಿಕಾಸ ಹಾಗೂ ಬಾಳುವೆಗಳು ಇಂತಹ ತತ್ವದ ಪ್ರತಿಪಾದನೆ, ಅನುಷ್ಠಾನದ ಚಿತ್ರೀಕರಣವೇ ಆಗಿದೆ. ಸಾಮಾನ್ಯರಲ್ಲಿ ಅಸಾಮಾನ್ಯತೆಯನ್ನು ಪಡೆದ ಕೆಲವರೇ ಈ ನಿದರ್ಶನಗಳನ್ನು ಒದಗಿಸಬಲ್ಲರು. ಅಂಥವರ ಬದುಕಿನ-ನಂತರ ಆ ಬದುಕನ್ನು ತಿಳಿಯಲೆಳಸುವವರು ತಮ್ಮ ಮನೋಗತಕ್ಕೆ ಅನುಗುಣವಾಗಿ ಧರ್ಮ, ಮತ, ಪಂಥಗಳನ್ನು ಲೇಪಿಸಿ, ಅವುಗಳ ಹೆಸರಿನಲ್ಲಿ ಕ್ರೌರ್ಯಗಳನ್ನು ಕಾರುತ್ತ ಸಾಗುವರು. ಬುದ್ಧನು ಬೌದ್ಧ ಧರ್ಮದ ಸ್ಥಾಪನೆಯ ಗುರಿಯನ್ನು ಹೊಂದಿದ್ದನೇ? ಯೇಸುವು ಕ್ರೈಸ್ತಧರ್ಮ ಸ್ಥಾಪನೆಯನ್ನು ಉದ್ದೇಶಿಸಿದ್ದನೇ? ಮಹಮ್ಮದ ಪೈಗಂಬರನಿಗೆ ಇಸ್ಲಾಂ ಧರ್ಮ ಸ್ಥಾಪನೆಯ ಧ್ಯೇಯವಿದ್ದೀತೇ? ಬಸವಣ್ಣನಿಗೆ ವೀರಶೈವ ಇಲ್ಲವೆ ಲಿಂಗವಂತ ಧರ್ಮ ಸ್ಥಾಪನೆಯ ಆಕಾಂಕ್ಷೆ ಇದ್ದೀತೇ? ಮಹಾತ್ಮಾ ಗಾಂಧಿ ಅವರಿಗೆ ಯಾವ ಧರ್ಮ ಸ್ಥಾಪನೆಯ ಮಹದಾಸೆ ಇದ್ದಿತು? ಹೀಗೆ ಸಂಕುಚಿತ ಉದ್ದೇಶಗಳನ್ನು ಆ ಮಹಾನುಭಾವರು ಇರಿಸಿಕೊಂಡಿದ್ದರೆ ಅವರು ವಿಶ್ವಮಾನ್ಯತೆಯನ್ನು ಪಡೆಯುತ್ತಿರಲಿಲ್ಲ. ಇಂದಿನವರೆಗೂ ಜನಮನದಲ್ಲಿ ಶಾಶ್ವತಸ್ಥಾನವನ್ನು ಪಡೆಯುತ್ತಿರಲಿಲ್ಲ. ಎಲ್ಲ ಸಂಕುಚಿತತೆಗಳನ್ನು ಮೀರಿದವರು ಅವರು. ಯಾವುದೇ ಬಂಧನದಲ್ಲಿ ಅವರು ಬಂಧಿತರಾಗಿರುವುದು ಮಾನವ ಕುಲದ ವಿಕಟ ಪರಿಹಾಸ್ಯ. ಅವರ ಮತ್ತು ಸಾಮಾನ್ಯರಾದ ನಮ್ಮ ಮಧ್ಯದಲ್ಲಿ ಇರುವ ಕೊರಲಿನ ವಿಕಾಸಕ್ಕೆ ಸಾಕ್ಷಿಯಿದು. ಅಲ್ಲದೆ ಧರ್ಮವು ಮಾನವ-ನಿರ್ಮಿತ ಎಂಬುದಕ್ಕೆ ನಿರ್ವಿವಾದ ನಿದರ್ಶನವಿದು. ಇಂತಹ ಧರ್ಮಗಳನ್ನು ಮೀರಿ ನಿಂತವನೇ ಧಾರ್ಮಿಕ ವ್ಯಕ್ತಿ.

'ಸತ್ಯ'ವೇನೆಂಬುದನ್ನು ಕಂಡುಕೊಳ್ಳುವ ಹೋರಾಟವೇ ಮಾನವ ಕುಲದ ಇತಿಹಾಸ. ಈ ಸಾಧನೆಗಾಗಿ ಅನೇಕ ಸಾಧನೆಗಳನ್ನು ಅನೇಕರು ನಿರ್ಮಿಸಿಕೊಂಡಿದ್ದಾರೆ. ದೇವರು, ಜ್ಞಾನ, ವಿಜ್ಞಾನ, ಅಂತರ್‌ಜ್ಞಾನ, ಧರ್ಮ, ಆಧ್ಯಾತ್ಮ ನೀತಿ, ಯೋಗ ಮುಂತಾದವುಗಳು 'ಸತ್ಯ'ದ ಸಾಕ್ಷಾತ್ಕಾರಕ್ಕಾಗಿ ಮಾನವ ನಿರ್ಮಿತ ಸಾಧನಗಳು. ತಿಳಿಯಲಾರದ, ತಿಳಿಯಲಾಗದ ಯಾವುದೋ ಶಕ್ತಿಯಿಂದ ನಿರ್ಮಿತವಾದ ಜೀವ. ಆ ಶಕ್ತಿಯ ಸಾಕ್ಷಾತ್ಕಾರಕ್ಕಾಗಿ ನಿರಂತರವಾಗಿ ಹೋರಾಡುತ್ತಿದೆ. ಅದುವೆ ಆಧ್ಯಾತ್ಮಿಕ. ಭೌತಿಕಗಳೆಂಬ ಪ್ರಭೇದಕ್ಕೆ ಆಸ್ಪದವಿಲ್ಲ; ಕ್ಷಣಿಕ-ಅನಂತತ್ವಗಳನ್ನು ವಿಭಜಿಸುವುದು ದುಸ್ತರ. ಏಕೆಂದರೆ ಎರಡೂ, ತಿಳಿಯಲಾರದ ಶಕ್ತಿಯ ಮೂರ್ತಸ್ವರೂಪಗಳು. ಯಾರು, ಯಾವುದನ್ನೇ ಕುರಿತು ಏನೇ ಅಭಿವ್ಯಕ್ತಗೊಳಿಸಿದರೂ ಮಾನವಪೋಷಿತ ಸಂಕೇತಗಳ ಮೂಲಕವೇ, ಭಾಷೆಯ ಮೂಲಕವೇ ಈ ಸಂಕೇತ ಅಥವಾ ಭಾಷೆಗಳನ್ನು ಮೀರಿ ಇನ್ನಾವುದೇ 'ಸತ್ಯ'ವು ಅಸ್ತಿತ್ವದಲ್ಲಿರಲು ಸಾಕು. ಈ ತೆರನಾದ ವಿಚಾರ ಲಹರಿಯು ಒಂದು ತಿಳಿಯಲಾಗದುದರಿಂದ ಇನ್ನೊಂದು ತಿಳಿಯಲಾಗದುದರತ್ತ ಕರೆದೊಯ್ಯುತ್ತದೆ. ಈ ವಿವೇಚನೆಯು ಮುಂದುವರಿದರೆ ಕೊನೆ ಮೊದಲಿಲ್ಲದಂತಾದೀತು! ಅಂತೆಯೇ ಬಂಧನದಿಂದ ವಿಮೋಚನೆಗೊಳ್ಳಲು ಹೋರಾಡಿದವರು, ಜೊತೆಗೆ ಇತರರನ್ನೂ ವಿಮೋಚನೆಗೊಳಿಸಲು ಮಾರ್ಗದರ್ಶನ ಮಾಡಿದವರು





ಜಗದ್ವಂದ್ಯರು, ಮಹಾಮಾನವರು. ಈ ಸಾಲಿಗೆ ಬಸವಣ್ಣನವರು ವಿಶ್ವಮಾಲಿಕೆಯಲ್ಲಿ ಶೋಭಿಸುವಂಥವರು.

ವಿವಾದ ಘರ್ಷಣೆ, ಹೋರಾಟ, ಕಷ್ಟಾನುಭವ ಇಲ್ಲದೆ ಜೀವನವಿಲ್ಲ. ಅಂತೆಯೇ ಮಹಾಮಾನವರ ಜೀವನವು ಅವೆಲ್ಲವುಗಳಿಂದ ಕೂಡಿರುತ್ತದೆ. ಅವುಗಳೇ ಪ್ರಗತಿಯ, ಆತ್ಮೋನ್ನತಿಯ ದಿಟ್ಟವಾದ ಹೆಜ್ಜೆಗಳು. ಧೃತಿಗೆಡದೆ ಅವುಗಳಲ್ಲಿ ಮುಳುಗಿ, ಎದುರಿಸಿ ಮೆಟ್ಟಿನಿಲ್ಲುವ ಯೋಗ್ಯತೆಯನ್ನು ಪಡೆದು ಯಶಸ್ವೀ ಆದವರೇ ಮಹಾಮಾನವರು. ಎಲ್ಲ ಸಾಧು, ಸಂತ, ಸತ್ಪುರುಷರು ಜೀವನದ ಕೊನೆಯಿಲ್ಲದ ಜಟಿಲತೆಗೆ ಉತ್ತರ ನೀಡದಿದ್ದರೂ, ಸಮಸ್ಯೆಯನ್ನು ಪರಿಹರಿಸದಿದ್ದರೂ, ತಂತಮ್ಮ ಜೀವನದ ಕ್ರಮಗಳನ್ನು ಆ ದಿಸೆಯಲ್ಲಿ ಉದಾಹರಣೆಗಳನ್ನಾಗಿ ನೀಡುವರು. ಅವುಗಳ ಸೂಕ್ತಾಸೂಕ್ತತೆಗಳು ನಮ್ಮ ವಿವೇಚನೆಯನ್ನೇ ಅವಲಂಬಿಸಿರುವವು. ಅವುಗಳ ಅನುಸರಣೆಯು ಕೂಡ ನಮ್ಮ ಸಾಮರ್ಥ್ಯವನ್ನೇ ಕೂಡಿರುವದು. ಆದರೆ ಮಾನವ ಜೀವನದ ಸಾರ್ಥಕತೆ ಮಾತ್ರ ವಿವಾದ, ಘರ್ಷಣೆ, ಹೋರಾಟ ಮತ್ತು ಕಷ್ಟಾನುಭವಗಳಲ್ಲಿಯೇ ಅಡಕವಾಗಿದೆಯೆಂಬುದು ಸತ್ಯಸ್ಯಸತ್ಯವಾಗಿದೆ. ಮಹಾಮಾನವ ಬಸವಣ್ಣನ ಜೀವನವೂ ಇದಕ್ಕೆ ಹೊರತಾಗಿಲ್ಲ. ಅವರ ಚಾರಿತ್ರ್ಯವು ಜೀವನದ ರಸಪಾಕವಾಗಿ, ನೈಜ ಮಹಾಮಾನರ ಕಥೆಯಾಗಿ ಮಾರ್ಪಟ್ಟಿದೆ.

ಬಸವಣ್ಣನವರ ಜೀವನಕ್ಕೆ ಸಂಬಂಧಿಸಿದ ಅನೇಕ ವಿವಾದಗಳು ಸ್ವಾಭಾವಿಕವಾಗಿ ಕಂಡುಬರುತ್ತವೆ.

1. ಬಸವಣ್ಣನವರ ತಾಯ್ತಂದೆಯರು ಯಾರು? ಮಾದರಸ-ಮಾದಲಾಂಬಿಕೆಯರೆ? ಚಂದಿರಾಜ-ಚಂದ್ರಾಂಬಿಕೆಯರೆ? ಚಿಕ್ಕಂದಿನಲ್ಲಿಯೇ ತಾಯ್ತಂದೆಯರನ್ನು ಅವರು ಕಳೆದುಕೊಂಡಿದ್ದು ಮಾದರಸ-ಮಾದಲಾಂಬಿಕೆಯರು ಸಾಕು ತಾಯ್ತಂದೆಯರೆ? ಕಾಗದ-ಮುದ್ರಣಗಳಿಲ್ಲದ ಅಂದಿನ ಪರಿಸರದಲ್ಲಿ ಲಭ್ಯವಿದ್ದ ಶಿಲಾಶಾಸನ, ತದನಂತರ ದೊರೆತ ಲಿಖಿತ ಸಾಮಗ್ರಿಗಳನ್ನು ಆಧರಿಸಿ ಮಾದರಸ-ಮಾದಲಾಂಬಿಕೆಯರೇ ಅವರ ತಾಯ್ತಂದೆಯರೆಂದು ಪರಿಗ್ರಹಿಸಲಾಗಿದೆ.

2. ಅವರ ಹುಟ್ಟಿನ ದಿನದ ಬಗೆಗೂ ಸಂದೇಹಾಸ್ಪದ ವಿವಾದ : 1131, 1139 ಇಲ್ಲವೆ 1260? ಉಪಲಬ್ಧವಿದ್ದ ಆಧಾರಗಳಿಂದ ಒಪ್ಪಿತ ತರ್ಕಕ್ಕೆ ಬಂದು 1131 ವೈಶಾಖ ಶುದ್ಧ ತೃತೀಯ ಎಂದು ಸರ್ವವಪ್ಪಿತ ದಿನವೆಂದು ನಿಗದಿಪಡಿಸಲಾಗಿದೆ.

ಅವರು ಯಾವುದೇ ತಾಯ್ತಂದೆಗಳಿಂದ ಜನಿಸಿರಲಿ, ಯಾವುದೇ ದಿನದಂದು ಜನಿಸಿರಲಿ, ಅವರ ಜನನವೊಂದು ಅಮೋಘ ಘಟನೆ. ಸಾಮಾನ್ಯ ಮಾನವನಾಗಿ ಜನಿಸಿ, ಅಸಾಮಾನ್ಯತೆಯನ್ನು ಸ್ವಂತದ ಬಲದಿಂದ ತಂದುಕೊಂಡು 'ಮಹಾಮಾನವ'ನಾದುದಂತೂ ನಿರ್ವಿವಾದ.

3. ಹುಟ್ಟಿನಿಂದಲೇ ನಿಶ್ಚಲತೆಯನ್ನು ಅವರ ದೇಹ ಪಡೆದಿತ್ತೆಂದು ಇತಿಹಾಸದ ನಿವೇದನೆ. ಜೀವಿಯ ಅಂತಿಮ ಸ್ಥಿತಿಯನ್ನು ಹುಟ್ಟಿನಲ್ಲಿಯೇ ಅವರು ಪಡೆದಿದ್ದರೆಂಬ ಮೂಲಕ ನಿಸರ್ಗದ ಅದ್ಭುತ ಕೊಡುಗೆ ಅವರಾಗಿದ್ದರೆಂಬುದರ ಸಂಕೇತ ಅದು. ನಿಶ್ಚಲವಾದುದು ಚಲನೆಯನ್ನು ಪಡೆದು ಮತ್ತೆ ನಿಶ್ಚಲವಾಗುವುದು ನಿಸರ್ಗದ ನಿಯಮ ಹಾಗೂ ತತ್ವ ಮತ್ತು ಧರ್ಮ. ಆದರೂ ನಿಶ್ಚಲತೆಗೆ ಚಾಲನೆಯನ್ನು ಒದಗಿಸಲು ಜಾತವೇದ ಮುನಿಗಳು ಕಾರಣರಾದುದು, ಜಾತವೇದ ಮುನಿಗಳ ಅಸಾಮಾನ್ಯತೆಯನ್ನು ತೋರಿಸುತ್ತದೆ.

4. ಅವರ ಉಪನಯನವನ್ನು ಕುರಿತ ತರ್ಕ : ಅ) ಶೈವಸಂಪ್ರದಾಯದ ಪ್ರಕಾರ 8ನೆಯ ವಯಸ್ಸಿನ ಬಸವನಿಗೆ (ಗಂಡು ಮಗು ಆದುದರಿಂದ) ಜನಿವಾರ ತೊಡಿಸಿ ಉಪನಯನವನ್ನು ಮಾಡಿಸುವುದು. ಅದನ್ನು ಬಸವಣ್ಣನು ನಿರಾಕರಿಸಿದನು. ಬ) 8ನೆಯ ಚಿಕ್ಕವಯಸ್ಸಿನಲ್ಲಿ ಅವರು ಜನಿವಾರ ಧರಿಸಿಕೊಂಡು 16ನೆಯ ವಯಸ್ಸಿನವರೆಗೆ ಜನಿವಾರ ಧರಿಸಿದವರಾಗಿದ್ದರು. ತಿಳಿವಳಿಕೆ ಮೂಡಿದನಂತರ ಆ ಜನಿವಾರವನ್ನು ಬಿಸುಟಿದರು. ಅದೇನೇ ಇದ್ದರೂ ಬಸವಣ್ಣನಿಗೆ ಜನಿವಾರ ಧಾರಣೆ ಮಾಡಿಸಲಾಗಿತ್ತು. ಈ ವಿಧಿಯ ಕ್ರಮದಲ್ಲಿ ಅವರು ಜನಿವಾರವನ್ನು ಕಿತ್ತೆಸೆದರೇ ಅಥವಾ 8 ವರುಷಗಳ ನಂತರ ತೆಗೆದೊಗೆದರೋ? ಅವರು ಜನಿವಾರವನ್ನು ಕಿತ್ತೊಗೆದುದು ನಿಜವಾದ ಘಟನೆಯಾಗಿ ನಿಂತಿದೆ.

ಯಾವುದೇ ಘಟನೆ ನಡೆಯಬೇಕಾದರೆ ಇಂದಿನ ವಿಜ್ಞಾನ ಅಥವಾ ಮನೋವಿಜ್ಞಾನದ ದೃಷ್ಟಿಯಿಂದಲೂ ಕಾರಣಗಳು ಇರಲೇಬೇಕು. 1) 8ನೆಯಯ ವಯಸ್ಸಿನ ಮಗುವಿಗೆ ಉಪನಯನದ ವಿಧಿಯನ್ನು ನಿರಾಕರಿಸುವ ಜ್ಞಾನವಿರಬಹುದೇ ಹೇಗೆ ಎಂಬುದು ಕೆಲವರ ವಾದ. ಶಂಕರಾಚಾರ್ಯ, ಜೆ.ಎಸ್.ಮಿಲ್ ಅವರ ಉದಾಹರಣೆಗಳೊಂದಿಗೆ ಇಂದಿನ ಗಣಿತಜ್ಞೆ ಶಕುಂತಲಾ ದೇವಿಯವರ ಉದಾಹರಣೆಯನ್ನೂ ಸೇರಿಸಿ, ಪ್ರಸಕ್ತ ಚರ್ಚೆಯು ಬಸವಣ್ಣನವರೂ ಜನಿವಾರವನ್ನು ನಿರಾಕರಿದರೆಂಬುದನ್ನು ಪುಷ್ಟಿಗೊಳಿಸಬಹುದಾಗಿದೆ. 2) ಬ್ರಾಹ್ಮಣೇತರ ಮಕ್ಕಳೊಂದಿಗೆ ಆಟವಾಡುತ್ತಿದ್ದ ಬಸವ, ತನಗಿಂತ ಹಿರಿಯಳಾದ ಅಕ್ಕನಾಗಮ್ಮನಿಗೆ ಹಾಗೂ ತನ್ನ ಓರಿಗೆಯವರಿಗೆ ನಡೆಯಲಾರದ ಉಪನಯನವು ತನಗೇತಕೆ

ಎಂಬ ವಿಚಾರ ಪ್ರಾಬಲ್ಯಕ್ಕೆ ಬಸವಣ್ಣ ಒಳಗಾಗಿ ಜನಿವಾರ ತ್ಯಜಿಸಿದನೆಂಬುದು ತರ್ಕಬದ್ಧವಾದೀತು! 3) ಬಾಗೇವಾಡಿಯ ಉನ್ನತ ಅಧಿಕಾರಿಯಾಗಿದ್ದ ಮಾದರಸನು ವೈಚಾರಿಕನಾಗಿದ್ದು, ಬಸವನ ಸಮ್ಮುಖದಲ್ಲಿ ಈ ವಿಧಿಯ ಕರ್ಮಠತನವನ್ನು ಚರ್ಚಿಸಿ, ಸಂಪ್ರದಾಯಬದ್ಧತೆಯ ಬಗೆಗೆ ತನ್ನ ಅಸಹಾಯಕತೆಯನ್ನು ವ್ಯಕ್ತಪಡಿಸುತ್ತಿದ್ದಿರಲೂ ಸಾಕು. ಬಸವಣ್ಣನಿಗೆ ಇದೂ ಪ್ರೇರಣೆ ನೀಡಿರಬಹುದೆ? 4) ಇಂಗಳೇಶ್ವರವು ಬಸವಣ್ಣನ ತಾಯಿಯ ತವರುಮನೆ. ಬಾಲ್ಯಾವಸ್ಥೆಯ ಬಹುಕಾಲವನ್ನು ಬಸವಣ್ಣನು ಅಲ್ಲಿ ಕಳೆದನೆಂಬುದು ಐತಿಹ್ಯ. ಅಲ್ಲಿ ರೇವಣಸಿದ್ಧೇಶ್ವರರ ವೈದಿಕ ವಿರೋಧಿ ಪ್ರಭಾವವು ಸಾರ್ವತ್ರಿಕವಾಗಿದ್ದಿತು. 'ಕರ್ಮ' ವಿಚಾರಕ್ಕಿಂತ 'ನಿಜಭಕ್ತಿ' ಮಾರ್ಗವು ಜನಪ್ರಿಯವಾಗಿ ಪ್ರಚಲಿತವಾಗಿತ್ತು. ಈ ಪ್ರಭಾವವು ಬಸವಣ್ಣನ ಮೇಲೆ ಅಚ್ಚಳಿಯದ (ಅವನು ಪ್ರೌಢನಲ್ಲದಿದ್ದರೂ) ಬೇರೂರಿ, ಉಪನಯನ ವಿಧಿಯ ಸಂಕೇತವಾದ ಜನಿವಾರವನ್ನು ಬಸವಣ್ಣನು ನಿರಾಕರಿಸಿರುವ ಸಾಧ್ಯತೆಯೂ ಇದೆ.

**ಬಸವಣ್ಣ ಮನೆಬಿಟ್ಟು ಹೋದುದು :**

1. ಒಟ್ಟಿನಲ್ಲಿ ಬಸವಣ್ಣನು ಉಪನಯನ, ಅದರ ವಿಧಿ ಜನಿವಾರಗಳನ್ನು ತಿಳಿದೋ, ತಿಳಿಯದೆಯೋ ನಿರಾಕರಿಸಿದನೆಂಬುದು ಐತಿಹಾಸಿಕ ಸತ್ಯವಾಗಿ ಪರಿಣಮಿಸಿದೆ. ಈ ಸತ್ಯವೆಷ್ಟು ನಿಜವೂ ಅಷ್ಟೇ ನಿಜ ಅವನು ಮನೆಬಿಟ್ಟು ಹೋದುದು. ಬಹುಶಃ ಸಂಪ್ರದಾಯ, ಮೂಢನಂಬಿಕೆಗಳ ತುಳಿತಕ್ಕೆ ಸಿಕ್ಕ ಸಮಾಜವು ಅವನನ್ನು ಬಹಿಷ್ಕರಿಸಿರಲೇಬೇಕು.

2. ಬಸವಣ್ಣನ ಈ ಹಟವಾದಿತನವು ಅಸಹನೀಯವಾಗಿ ಅಂದಿನ ಕರ್ಮಠ ಸಮಾಜವು ಬಾಲ್ಯಾವಸ್ಥೆಯಲ್ಲಿರುವ ಬಸವನ ಎಳೆತನವನ್ನೂ ಗಮನಿಸದೆ ಸಮಾಜಬಾಹಿರನನ್ನಾಗಿ ಮಾಡಿರುವ (ಕ್ರೂರತನಗಳು ಸರ್ವಸಾಮಾನ್ಯವೆನಿಸಿದ ಕಾಲವದು) ಸಾಧ್ಯತೆ ಹೆಚ್ಚು ವಾಸ್ತವ. ತಾಯ್ತಂದೆಗಳು ಮಗನ ಹಟವನ್ನು ಸಹಿಸಿಕೊಂಡು ಅವನು ಬೇರೆಡೆಗೆ ಹೇಗೋ ಬದುಕು ಮುಂದುವರಿಯಬೇಕೆಂದು ಅಕ್ಕನಾಗಮ್ಮನನ್ನು ರಕ್ಷಾಕವಚವಾಗಿಸಿ ಜಾತವೇದ ಮುನಿಗಳಲ್ಲಿ ಅವನನ್ನು ಮಾದರಸನೇ ಕಳಿಸಿರಲೂ ಸಾಧ್ಯವಿದೆ ಎಂಬುದೂ ಸಮರ್ಪಕಕ ತರ್ಕ. ಇಲ್ಲವೆ ತಮ್ಮ ಕುಟುಂಬವನ್ನೇ ಶೈವಬ್ರಾಹ್ಮಣ ಸಮಾಜವು ಬಹಿಷ್ಕರಿಸಬಹುದೆಂಬ ಹೆದರಿಕೆಯೂ ಅವನಲ್ಲಿ ಉಂಟಾಗಿ ಈ ಕ್ರಮವನ್ನು ಕೈಕೊಂಡಿರಬಹುದು.

**ಆಘಾತಗಳಿಂದ ಮಾನಸಿಕ ಪರಿವರ್ತನೆ :**

ಬಾಲ್ಯಾವಸ್ಥೆಯಲ್ಲಿಯ ಈ ಅಘಾತಗಳು. ಬಾಲ್ಯಾವಸ್ಥೆಯಲ್ಲಿಯೇ (ತಾಯ್ತಂದೆಗಳು ಜೀವದಿಂದಿದ್ದರೂ) ಅನಾಥತನದ ಅನಿಸಿಕೆಗಳು ಅವನಲ್ಲಿ ಹುದುಗಿದ್ದ ಮೂಲ ಪ್ರತಿಭೆಯ ಅರಳುವಿಕೆಗೆ ಅಲ್ಲದೆ, ತನ್ಮೂಲಕ ಪ್ರತಿಭಟಿಸುವ ಅದಮ್ಯ ಸಾಮರ್ಥ್ಯವನ್ನೂ ಪ್ರಜ್ವಲಿಸಿ, ಜೀವನದುದ್ದಕ್ಕೂ ಅವನು 'ಪ್ರತಿಭಟ'ನಾಗಿ (Protestant) ಉಳಿಯುವಂತೆ ಮಾಡಿತು.

ಜಾತವೇದಮುನಿಗಳ ಆಶ್ರಯದಲ್ಲಿ 8-10 ವರುಷಗಳವರೆಗೆ (ಅವನ ಪ್ರಾಯದವರೆಗೆ) ಆರ್ಥಿಕ-ಸಾಮಾಜಿಕ ದಿಗ್‌ಬಂಧನಕ್ಕೆ ಒಳಪಟ್ಟು, ಯಾತನೆಯನ್ನು ಸಹಿಸುತ್ತ, ವೇದ್ರ-ಶಾಸ್ತ್ರ-ಪುರಾಣಗಳೇ ತನ್ನ ಉಸಿರೆಂಬಂತೆ ಆಳವಾಗಿ ಅಧ್ಯಯನ ಮಾಡಿ, ತನ್ನ ವಿಮರ್ಶಾತ್ಮಕ ಚಿಂತನೆಯನಿಂದ ಬುದ್ಧಿಯ ತೀಕ್ಷ್ಣತೆಯನ್ನು ಮೊನಚುಗೊಳಿಸಿಕೊಂಡನು. ಹೀಗೆ ಜೀವನದ ಎಲ್ಲ ಕಹಿ-ಕಟು ಅನುಭವಗಳು ಕೂಡಿಬಿದ್ದು, ಅವನಲ್ಲಿ ಮನೋಪರಿವರ್ತನೆಯಾಗಿ ನೂತನ ಮಾನವನಾಗಿ ಹೊರಬಂದಿರಲು ಸಾಕು. ಧರ್ಮದ ಮನೋವಿಜ್ಞಾನ ಶಾಸ್ತ್ರವೂ (Psychology of religion) ಈ ತತ್ತ್ವವನ್ನೇ ಧಾರಾಳವಾಗಿ ಪ್ರತಿಪಾದಿಸುತ್ತದೆ. ಇಂತಹ ಮನೋಪರಿವರ್ತನೆಯು ಪರ್ಯವಸಾನ ಹೊಂದುವದು ಎರಡೇ ಮಾರ್ಗಗಳಲ್ಲಿ : ಒಂದು ಸನ್ಮಾರ್ಗ, ಇನ್ನೊಂದು ದುರ್ಮಾರ್ಗ. ಅಲ್ಲದೆ ಇಂತಹ ಮನೋಪರಿವರ್ತನೆಯು ಸಾಮಾನ್ಯವಾಗಿ ಯೌವ್ವನದಲ್ಲಿ ಆಗುವುದುಂಟೆಂದು ಪ್ರಸ್ತಾಪಿಸಲಾಗುತ್ತಿದೆ. ಈ ತತ್ತ್ವಕ್ಕನುಗುಣವಾಗಿ ಬಸವಣ್ಣನು ತೀವ್ರಯಾತನೆಯಿಂದ ವರ್ಷಗಳ ಕಾಲ ಬಳಲಿ, ಮಾನಸಿಕ ತುಮುಲದಲ್ಲಿ ಸಿಲುಕಿ, ತನ್ನ ಅಧ್ಯಯನದ ಪರಿಣಾಮದ ಪ್ರತೀಕವಾಗಿ ಸನ್ಮಾರ್ಗಾನುಸಾರಿಯಾಗಿ ಪಕ್ವಗೊಂಡು ಹೊರ ಹೊಮ್ಮಿದನು.

**ವೃತ್ತಿಯಲ್ಲಿ ಪ್ರವೇಶ :**

ಆಶ್ರಮದಲ್ಲಿಯೇ ಅನೇಕ ಚರ್ಚೆ, ಗೋಷ್ಠಿ, ಬೌದ್ಧಿಕ ವಾದ-ವಿವಾದಗಳಲ್ಲಿ ಬಸವಣ್ಣನು ಭಾಗವಹಿಸಿ ಹೆಸರುವಾಸಿಯಾಗಿದ್ದನು. ಅವನ ಕೀರ್ತಿಯು ಎಲ್ಲೆಡೆ ಹರಡಿ. ಬಸವಣ್ಣನ ತಾಯಿಯ ಸೋದರ ಬಲದೇವ ಮಂತ್ರಿಯ ಕಿವಿಗೂ ತಲುಪಿತು. ಮಾನವ ಸಹಜ ಸ್ವಭಾವದಂತೆ, ಖ್ಯಾತಿವೆತ್ತ ಬಸವಣ್ಣನಿಗೆ ತನ್ನ ಮಗಳು ಗಂಗಾಂಬಿಕೆಯನ್ನು ಕೊಟ್ಟು ಮದುವೆ ಮಾಡಿದುದಲ್ಲದೆ, ಕರಣಿಕ ವೃತ್ತಿಯಲ್ಲಿಯೂ ಪ್ರವೇಶಿಸುವಂತೆ ಮಾಡಿದನು. ಕರಣಿಕ ವೃತ್ತಿಯಲ್ಲಿಯ ಅವನ ಕಾರ್ಯತತ್ಪರತೆ, ಪ್ರತಿಭೆ ಮುಂತಾದ ಅಸಾಧಾರಣ ಸಾಮರ್ಥ್ಯಗಳು ಅವನನ್ನು ಶೀಘ್ರದಲ್ಲಿಯೇ ಭಂಡಾರಿಯ ಸ್ಥಾನಕ್ಕೇರಿಸಿದವು.





**ಎರಡನೇ ಮದುವೆ :**

ತನ್ನ ಮಹತ್ವಾಕಾಂಕ್ಷೆಯನ್ನು ಪೂರೈಸಿಕೊಂಡು ಸಾಮ್ರಾಟನಾಗಿ ಪ್ರತಿಷ್ಠಾಪನಗೊಂಡ ಬಿಜ್ಜಳನು ತನ್ನಲ್ಲಿಯ ಜನತೆಯ ವಿಶ್ವಾಸವನ್ನು ಅಧಿಕಗೊಳಿಸಿಕೊಳ್ಳಲು. ಜನಪ್ರಿಯನಾದ, ಜನ ನಂಬುಗೆಗೆ ಪಾತ್ರನಾದ ಬಸವಣ್ಣನನ್ನು ಮಂತ್ರಿಯನ್ನಾಗಿ ಮಾಡಿದುದಲ್ಲದ, ತನ್ನ ಸಾಕುತಂಗಿಯಾದ ನೀಲಲೋಚನೆಯನ್ನೂ ಆತನಿಗೆ ಕೊಟ್ಟು ಅವನಿಗೆ ಎರಡನೆಯ ಮದುವೆಯನ್ನು ಮಾಡಿದನು. ರಕ್ತಸಂಬಧವು ಪರಸ್ಪರ ವಿಶ್ವಾಸ, ಬಂಧನವನ್ನು ಬಿಗಿಗೊಳಿಸುವುದಲ್ಲದೆ, ತನ್ಮೂಲಕ ತನ್ನಲಿಯೂ ಜನರ ವಿಶ್ವಾಸವು ಅಚಲವಾಗಬಹುದೆಂದು ಬಿಜ್ಜಳನು ಬಲವಾಗಿ ನಂಬಿರಲು ಸಾಕು.

ಸಮಾಜ, ಅಧಿಕಾರ, ಜ್ಞಾನ, ಶೀಲ, ಅಧ್ಯಯನ ಮತ್ತು ಸಾಧನೆಗಳಲ್ಲಿ ಅತ್ಯುನ್ನತ ಮಟ್ಟಕ್ಕೆ ಏರಿದ ಬಸವಣ್ಣನು ಎರಡನೇ ಮದುವೆಗೆ ಒಪ್ಪಿದುದು ಕುತೂಹಲಕಾರಿಯಲ್ಲದೇ, ರಹಸ್ಯಮಯವೂ ಆದುದು. ಜೊತೆಗೆ ಸ್ತ್ರೀ ಸಹಜ ಸ್ವಭಾವದ ದೃಷ್ಟಿಯಿಂದ ನೋಡಿದರೂ ಬಸವಣ್ಣನ ಮೊದಲನೆಯ ಪತಿ ಗಂಗಾಂಬಿಕೆಯು ತನ್ನ ಗಂಡನ ಇನ್ನೊಂದು ಮದುವೆಗೆ ಸಮ್ಮತಿಸಿದುದೂ ವಿಚಿತ್ರವಾಗಿ ತೋರುತ್ತದೆ. ಹೀಗೆ ಈ ಎರಡನೇ ಮದುವೆಯು ಅನೇಕ ಸಂದೇಹ, ವಿವಾದಗಳಿಗೆ ಆಸ್ಪದ ಮಾಡಿಕೊಡುತ್ತದೆ.

1. ಈ ಮದುವೆಯೂ ಅಂದಿನ ಸಾಮಾಜಿಕ ರೂಢಿಯಿಂದು ಅಪವಾದಾತ್ಮಕತೆಯ ಲೇಪನದಿಂದ ಮುಕ್ತವಾಗಿರಬಹುದು.

2. ಸಿಂಗಿರಾಜನ ಪ್ರಕಾರ ನೀಲಲೋಚನೆಯು ಸಿದ್ಧರಸನ ಮಗಳು. ಸಾಕು-ತಂಗಿಯೆಂದು ಬಿಜ್ಜಳನು ದೊಡ್ಡವರಿಗೆ ಕೊಟ್ಟು ಮದುವೆ ಮಾಡಿದ ಹೆಸರು ಪಡೆಯುವ ಯತ್ನದ ಸಫಲತೆಯಿದಾಗಿರಬೇಕು.

3. ಹರಿಹರನ ಮೇರೆಗೆ ಗಂಗಾಂಬಿಕೆ ಮತ್ತು ಮಾಯಿದೇವಿ ಎಂಬಿಬ್ಬರು ಬಸವಣ್ಣನ ಮಡದಿಯರು. ಆದರೆ ಅವರೀರ್ವರ ತಂದೆಯ ಹೆಸರುಗಳ ನಮೂದನೆ ಇಲ್ಲ. ಮಾಯಿದೇವಿ ಮತ್ತು ನೀಲಲೋಚನೆ ಇಬ್ಬರೂ ಒಂದೇ ಎಂಬ ಗ್ರಹಿಕೆ. ಅಲ್ಲದೆ ಗಂಗಾಂಬಿಕೆಯು ತಂದೆ ಬಲದೇವನೇ ಎಂಬುದು ಸಂದೇಹಾತೀತ. ಅವರಂತೆ ನೀಲಲೋಚನೆಯ ತಂದೆ ಸಿದ್ಧರಸನೆಂಬುದೂ ಒಪ್ಪಿತ. ಆದರೆ ಈ ಎರಡನೆ ಮದುವೆಯ ಕಾರಣಗಳ ಮೇಲೆ ಬೆಳಕು ಚೆಲ್ಲಲಿ.

4. ಹರಿಹರನ ಪ್ರಕಾರ ಸಿದ್ಧರನು ಗಂಗಾಂಬಿಕೆಯ ಉದರದಿಂದ ಬಸವಣ್ಣನ ಮಗನಾಗಿ ಹುಟ್ಟಿದ್ದನು. ಅಂದ ಮೇಲೆ ನೀಲಲೋಚನೆಯ ತಂದೆ ಸಿದ್ಧರನೆಂಬ ನಂಬುಗೆ ಹುಸಿಯಾಗುವದು ಅದುವೇ ಕಾರಣ ಆಕೆ ಬಿಜ್ಜಳನ ಸಾಕು ತಂಗಿಯೆಂದು ನಂಬಲು ಇಂಬಾಗುವದಷ್ಟೆ.

5. ಈ ಎರಡನೆಯ ಮದುವೆಯು ಎಂದಾಯಿತೆಂಬುದಕ್ಕೆ ಆಧಾರಗಳು ಲಭ್ಯವಿಲ್ಲ. ಆದುದರಿಂದ ಅದಕ್ಕೆ ಕಾರಣಗಳೂ ದುರ್ಲಭ. ಆದರೆ ತರ್ಕ ಹಾಗೂ ಮನುಷ್ಯ ಸ್ವಭಾವದ ವಿಚಾರಗಳನ್ನೋಡಿಸಿದರು ಗಂಗಾಂಬಿಕೆಯು ಗಂಡು ಮಗುವನ್ನು ಹೆರುವ ಪೂರ್ವದಲ್ಲಿಯೇ ಈ ಎರಡನೆ ಮದುವೆಯು ನಡೆದಿಸಬಹುದೆಂಬುದು ಸುಸಂಗತ. ಮಗುವನ್ನು ಪಡೆಯುವ ಬಯಕೆ ಪ್ರಬಲವಾಗಿ ಬಸವಣ್ಣನು ಎರಡನೆ ಮದುವೆಗೆ ಒಪ್ಪಿರಬಹುದು. ಈ ದಿಸೆಯಲ್ಲಿ ಬಿಜ್ಜಳನು, ಬಸವಣ್ಣ ಹಾಗೂ ಗಂಗಾಂಬಿಕೆಯರ ಮನವೊಲಿಸಿರಲೂ ಸಾಕು.

6. ತಾನು ನಂಬಿದ ತತ್ತ್ವಗಳ, ತಾನು ಬದುಕಲೆಳಸಿದ ತತ್ತ್ವಗಳಿಗೆ ಅನುಗುಣವಾಗಿ ಸಮಾಜವನ್ನು ರೂಪಿಸಿ ಸಮಾಜವನ್ನು ಪುನರ್ ರಚಿಸಲು ಆಸ್ಪದವಾಗಿ, ಅದಕ್ಕಾಗಿ ಅಧಿಕಾರ, ಹಣ ಮುಂತಾದವುಗಳ ಅನುಕೂಲತೆ ಹಾಗೂ ಬಲವು ಒದಗಬಹುದೆಂದು ನಂಬಿ ಬಿಜ್ಜಳ ಪ್ರಣೀತ ಎರಡನೆ ಮದುವೆಯನ್ನು ಮಾಡಿಕೊಂಡಿರಬಹುದೆಂಬ ತರ್ಕ ಹೆಚ್ಚು ಸುಸಂಗತವಾದೀತು !

**ಮಾನಸಿಕ ಪರಿವರ್ತನೆ ಹಾಗೂ ತತ್‌ಪರಿಣಾಮಗಳು :**

ಎಲ್ಲ ಮಾನಸಿಕ ತಾಕಲಾಟಗಳಲ್ಲಿ ವೈಯಕ್ತಿಕ ಮತ್ತು ಕೌಟುಂಬಿಕ ತಾಕಲಾಟಗಳು ಪ್ರಗಲ್ಭ ಪರಿಣಾಮಗಳನ್ನು ಬೀರುತ್ತವೆ ; ಮಾನಸಿಕ ತುಮುಲವನ್ನೇ ನಿರ್ಮಿಸುತ್ತವೆ. ಈ ಮಾನಸಿಕ ವೈಪರೀತ್ಯಗಳು ಸ್ಥಿತಪ್ರಜ್ಞತೆಗೂ ಕರೆದೊಯ್ಯುತ್ತವೆ. ಮಾನವಜನ್ಯವಾದ ಯಾವ ವಿಪರೀತತೆಗಳೂ ಅವನನ್ನು ಎದೆಗುಂದಿಸಲಿಲ್ಲ. ಅಂತೆಯೇ ಅವನೂ ಸ್ಥಿತಪ್ರಜ್ಞ ಸ್ಥಿತಿಯನ್ನು ತಲುಪಿರಲೇಬೇಕು. ಈ ಮಾನಸಿಕ ನೆಲೆಗಟ್ಟು ಅವನಲ್ಲಿ ನಿರ್ಮಾಣವಾಗಲು, ವರುಷಗಳುದ್ದಕ್ಕೂ ಬಸವಣ್ಣನ ಅಧ್ಯಯನ-ಚಿಂತನೆಗಳೇ ಮೂಲಕಾರಣ ಯಾವುದೇ 'ಕಾಣದ ಕೈ' ಅವನಲ್ಲಿ ಮಾನಸಿಕ ಪರಿವರ್ತನೆಯನ್ನು ತಂದೊಡ್ಡಿತೆನ್ನುವದನ್ನು ವಾದಕ್ಕಾಗಿ ಒಪ್ಪಿ, ಶಂಕರಾಚಾರ್ಯರು, ಜೆ.ಎಸ್.ಮಿಲ್, ಆಧುನಿಕ ಗಣಿತಜ್ಞೆ ಶಕುಂತಲಾದೇವಿ, ಸೇಂಟಕ್ಯಾಥರಿನ್, ಅಕ್ಕಮಹಾದೇವಿ ಮುಂತಾದವರ ಪರಿವರ್ತನೆಯನ್ನು ವಿಶ್ಲೇಷಿಸಲು ಯತ್ನಿಸಿದರೆ

ಒಂದು ಸಂಗತಿಯು ಒಪ್ಪಿತವಾಗುವಂತಿದೆ; ಅಲ್ಲದೆ ಮಹತ್ತರ ವ್ಯತ್ಯಾಸವೊಂದು ಹೊಳೆಯುತ್ತದೆ. ಮೇಲೆ ಉದ್ಧರಿಸಿದ ವ್ಯಕ್ತಿಗಳಲ್ಲಿಯ ಪ್ರತಿಭೆಯು, ಪರಿವರ್ತನೆಯ ನಂತರ ಒಂದೇ ದಿಸೆಯಲ್ಲಿ ವಿಕಾಸವಾಗುತ್ತ ಹೋಗುವದು ಕಂಡುಬರುತ್ತದೆ. ಆದರೆ ಬಸವಣ್ಣನಲ್ಲಿ ಪರಿವರ್ತನೆಯ ನಂತರ ಅವನ ಪ್ರತಿಭೆಯು ಬಹುಮುಖಿಯಾದುದೂ ಕಾಣಸಿಗುವದು 'ಕಾಣದ ಕೈಯ ಕೈವಾಡ'ದ ಪಾತ್ರದ ವಿಸ್ತರಣೆ, ಪರಿವರ್ತನೆಯ ನಂತರ ಪ್ರಖರವಾಗಿರುವದು ಕಾಣದೆ, ಅವನಲ್ಲಿ ಕಿಡಿಗೊಂಡ ಚೇತನವು ತನ್ನದೇ ಆದ ರೀತಿಯಲ್ಲಿ ಸಮಷ್ಠಿ ರೂಪವನ್ನು ತಾಳಿ, ಈ ಜಗದ ಜೀವಿಗಳು ಎಲ್ಲವನ್ನೂ ತನ್ನ ಅಪ್ಪುಗೆಯಲ್ಲಿ ಸೆಳೆದುಕೊಂಡುದು ಸ್ವಯಂ ಸಿದ್ಧವಾಗಿರುವದು ತೋರುವದು. ಅಂತೆಯೇ ಮಾನವ ಜೀವನಕ್ಕೆ ಇರುವ ಪೂರಕ ಮಾರಕಗಳೆಲ್ಲವನ್ನೂ ತೂಗಿ ನೋಡಿ ಜೀವನದ ಸುಗಮತೆಯ ಹೆಜ್ಜೆಗಳನ್ನು ಗುರುತಿಸಲು ಯತ್ನಿಸಿ, ಬದುಕಿ, ಇತರರನ್ನೂ ಬದುಕಿಸಬಲ್ಲ ಪೂರಕ ಶಕ್ತಿಗಳನ್ನು ತೋರ್ಪಡಿಸುವ ಪರಿಯು ಬಸವಣ್ಣನಿಗೇ ಮೀಸಲು. ಸಾಮಾಜಿಕ, ಆರ್ಥಿಕ, ಧಾರ್ಮಿಕ, ಆಧ್ಯಾತ್ಮಿಕ, ವೈಚಾರಿಕ ಮುಂತಾದ ಜೀವನರಂಗದ ಕ್ಷೇತ್ರಗಳಲ್ಲೆಲ್ಲ ಆತ ಧುಮುಕಿದನು. ಅನಂತತೆಯ ಕುಂಚದಿಂದ ಸ್ಪರ್ಶಿಸಿದ ಕ್ಷಣಿಕತೆಗಳೆಲ್ಲವೂ ಅನಂತತೆಯನ್ನು ಪಡೆದು ಅವನ ಅನುಭವಗಳೇ ರಸಪಾಕವಾಗಿ ವಚನಗಳ ರೂಪವನ್ನು ಧರಿಸಿ ನಿಂತಿವೆ.

**ಅಧ್ಯಾತ್ಮಿಕ-ವೈಚಾರಿಕ ಚಿಂತನಗಳ ವೇದಿಕೆ, 'ಅನುಭವ ಮಂಟಪ' :**

ತಿಳಿಯಾದ, ಸರಳವಾದ, ಸುಲಭವಾದ ಭಾಷೆಯ ಬಳಕೆಯು ಬಸವಣ್ಣನ ಅಭಿವ್ಯಕ್ತಿಯ ವೈಶಿಷ್ಟ್ಯ. ಜನಸಾಮಾನ್ಯನ ಭಾಷಾ ಮಾಧ್ಯಮವಾದ 'ಕನ್ನಡ'ದ ಬಳಕೆಯೂ ಹೆಚ್ಚು ವೈಶಿಷ್ಟ್ಯಪೂರ್ಣ. ಆಧ್ಯಾತ್ಮ ಧರ್ಮ, ತತ್ವಜ್ಞಾನಗಳಲ್ಲಿ ಜನ ಸಾಮಾನ್ಯನನ್ನು ಅಳವಡಿಸುವ ಅಪೂರ್ವ ಹಾಗೂ ತೀರ ಸುಲಭ ಮಾರ್ಗವಿದು. ಬೌದ್ಧಿಕ ಹವ್ಯಾಸ-ಚಿಂತನೆಗಳೆಲ್ಲ ಮೇಲ್ವರ್ಜೆಯವರ, ಅಥವಾ ಬಸವಣ್ಣನ ಮಾತನ್ನೇ ಬಳಸಬೇಕೆಂದರೆ, 'ಹಾರು'ವರ ಗುತ್ತಿಗೆಯೆಂಬ ದೀರ್ಘಾವಧಿಯ ಪರಂಪರಾಗತ ಪ್ರತೀತಿಯನ್ನು ಮುರಿದೊಗೆದ ಶ್ರೇಯಸ್ಸಿನ ಪ್ರತೀಕವದು. ಈ ಮೂಲಭೂತ ನಂಬುಗೆಯ ಭದ್ರಬುನಾದಿಯನ್ನು ಆಧರಿಸಿ ನಿರ್ಮಿಸಿದ ವಿಚಾರ ವೇದಿಕೆಯೇ ಅನುಭವ ಮಂಟಪ. ಸಾಮಾನ್ಯ ಮಾನವನನ್ನೇ ಇದರ ಕೇಂದ್ರಬಿಂದುವನ್ನಾಗಿಸಿದುದು ಬಸವಣ್ಣನ ಅಪೂರ್ವತೆಗೆ ಸಾಕ್ಷಿ. ಅನುಭವಗಳ ವಿನಿಮಯ, ವಿಚಾರ ಮಂಥನ, ಜೀವನದ ಅಭೇದ್ಯ ಸಮಸ್ಯೆಗಳ ಚಿಂತನ, ಜೀವನದ ಅಂತಿಮ ಗುರಿಗಳನ್ನು ಕಂಡುಕೊಳ್ಳುವ ಛಲ-ಭರಿತ ಹವ್ಯಾಸಗಳಲ್ಲಿ ಪಾಲುಗೊಳ್ಳುವ ಅನಿರ್ಬಂಧಿತ ರೀತಿಯು, ಮಾನವ ಕುಲದ ಇತಿಹಾಸದಲ್ಲಿ ಬಸವಣ್ಣನಿಗೆ ಮೊಟ್ಟ ಮೊದಲನೆಯ ಸ್ಥಾನವನ್ನು ಕಲ್ಪಿಸಿದೆ. ಕುಲಭೇದ, ವೃತ್ತಿಬೇಧ, ಲಿಂಗಭೇದವಿಲ್ಲದ ಮುಕ್ತ ವಿನಿಮಯದ ಉದಾತ್ತ-ಉದ್ದೀಪ್ತ ವೇದಿಕೆಯಾಗಿತ್ತು ಅನುಭವ ಮಂಟಪ. ತತ್ವಜ್ಞಾನದ ಪಿತಾಮಹರೆಂದು ಕೀರ್ತಿವೆತ್ತ ಸಾಕ್ರೆಟಿಸ್, ಪ್ಲೆಟೊ ಮುಂತಾದವರನ್ನೆಲ್ಲ ವಿಶಿಷ್ಟತೆಯಲ್ಲಿ ಮೀರಿಸಿದ ಈ ವೇದಿಕೆಯ ಶಿಲ್ಪಿ ಬಸವಣ್ಣ. ಅಂತೆಯೇ ಅಂದು ಪ್ರಚಲಿತವಿದ್ದ ಎಲ್ಲ ಅಪನಂಬುಗೆಗಳಿಗೆ ಮಾರಕನಾದ ಅವನು, ಅಂದಿನ ಸಮಕಾಲೀನ ಪ್ರಜ್ಞೆಯ ಪ್ರತೀಕ ನಾಗಲೆಳಸಿದನೆಂದು ಹೇಳುವದಕ್ಕಿಂತಲೂ, ಇಂದಿನ ಪ್ರಗತಿಪರ ವೈಚಾರಿಕತೆಯ ಪ್ರತೀಕವಾಗಿ ಅಂದೇ ಆ ಮಂಟಪದಲ್ಲಿಯೇ ಪ್ರಸ್ತಾಪಿತವಾದನೆಂದು ಹೇಳುವದು ತೀರ ಸಮಂಜಸ. ಗಂಭೀರ ಚರ್ಚೆಯನ್ನು ಸುಲಭೀಕರಿಸಲು ದಿನನಿತ್ಯದ ಅನುಭವಗಳನ್ನು ಉದ್ಧರಿಸಿ, ನಿಗೂಢತೆಗಳನ್ನು ಭೇದಿಸುವ ಯತ್ನವು ಅನಿರ್ವಚನೀಯ. ಎಲ್ಲ ಕ್ರಾಂತಿಗೆ ಅಡಿಪಾಯ ವೈಚಾರಿಕ ಕ್ರಾಂತಿ. ಅನುಭವ ಮಂಟಪವು ಜೀವನದಿಯಲ್ಲಿ ಅನೇಕ ವೈಚಾರಿಕ ತಿರುವುಗಳನ್ನು ತಂದಿರಿಸಿ, ಆಳವಾಗಿ ಬೇರೂರಿದ್ದ ಅಪನಂಬುಗೆಗಳನ್ನೆಲ್ಲ ಅಲುಗಿಸಿತು. ವೈಚಾರಿಕ ಕ್ರಾಂತಿಯು ಕೇವಲ ವೈಚಾರಿಕ ಹಂತಕ್ಕೆ ಸೀಮಿತಗೊಳ್ಳದೆ ಕಿಡಿಗೊಂಡಿತು. ಸಾತ್ವಿಕ ರೊಚ್ಚು, ಪ್ರಾಮಾಣಿಕ ಕೆಚ್ಚುಗಳು ಅನುಭವ ಮಂಟಪದ ಎರಡು ಕಣ್ಣುಗಳಾದವು "Intellectual deficiency leads to moral degradation" ಎಂಬುದೊಂದು ಸಾಕ್ರೆಟಿಸನ ಉಕ್ತಿ. ''ಬೌದ್ಧಿಕ ಕೊರತೆಯು ನೀತಿಯ ಅಧೋಗತಿಗೆ ದಾರಿ'' ಎಂಬ ಮಾತು ತೀರ ಅರ್ಥಗರ್ಭಿತ. ಒಳಿತು-ಕೇಡುಗಳ ರೂಪವನ್ನರಿತು, ಅವುಗಳನ್ನು ವಿಂಗಡಿಸಿ, ನಿರ್ಣಯಿಸುವ ಸಾಮರ್ಥ್ಯದ ಕೊರತೆಯು ನೈತಿಕ ಅಧೋಗತಿಗೆ ಒಯ್ಯುತ್ತದೆಂಬುದು ಅದರ ಇಂಗಿತ ನೈತಿಕ ಅದೋಗತಿಯೆಂದರೆ ತನ್ನನ್ನರಿಯದೆ ಇತರರಿಗೆ ಮಾರಕನಾಗಿ ಬಾಳುವದು. ಬಸವಣ್ಣ ಇದನ್ನರಿತೇ ಸಾಕ್ರೆಟಿಸ್ ಉಕ್ತಿಯನ್ನು ಜೀವನದುದ್ದಕ್ಕೂ ಜ್ವಲಂತವಾಗಿರಿಸಿಕೊಂಡನು. ಸದಾ ಈ ದೃಷ್ಟಿಯಿಂದ ಬೌದ್ಧಿಕನಾಗಿ ಜ್ವಲಂತವಾಗಿರಿಸಿಕೊಂಡನು. ಸದಾ ಈ ದೃಷ್ಟಿಯಿಂದ ಬೌದ್ಧಿಕನಾಗಿ ಜಾಗೃತನಾಗಿದ್ದು ತನ್ನ ಜೀವನದಲ್ಲಿ ಎರಕ ಹೊಯ್ದನು. ಇದುವೇ ಅನುಭವ ಮಂಟಪದ ಹಿರಿಮೆಯಾಗಿತ್ತು.

**ಸಮತಾವಾದಿ :**

ಒಳಿತು-ಕೇಡುಗಳ ಅರಿವೇ ಇಂದಿನ ಪ್ರಜಾಪ್ರಭುತ್ವದ ಜೀವಾಳ. ಈ ಮೌಲ್ಯದ ಪ್ರಜ್ಞೆಯೇ ನ್ಯಾಯ-ಅನ್ಯಾಯದ





ತಿಳಿವಳಿಕೆಯ ಜೀವನಾಡಿ; ವ್ಯಷ್ಠಿಯನ್ನು ಸಮಷ್ಠಿಯನ್ನಾಗಿ ತಾರಕ ಮಂತ್ರ; ಸಾಮಾಜಿಕ ಜೀವನದ ಭದ್ರತೆಗೆ ನಾಂದಿ. ಬಸವಣ್ಣನ ನಂಬುಗೆ ಈ ಮೌಲ್ಯದಲ್ಲಿ ಅಚಲ. ನೂತನ ಮಾನವ ಸಮಾಜದ ಹೊಳಹಿನ ರೂಪಿಸುವಿಕೆ ಇದರಿಂದಲೇ ಹೊಮ್ಮಿತ್ತು. ಪ್ರಜಾಪ್ರಭುತ್ವ ವ್ಯವಸ್ಥೆಯು ಸರ್ವಶ್ರೇಷ್ಠವೆಂದು ಒಪ್ಪಿತವಾದ ಇಂದು, ಅದರ ಇತಿಮಿತಿಗಳ ಬಗೆಗೆ ಲೋಪ, ದೋಷಗಳ ಬಗೆಗೆ ಕಠೋರವಾದ ಟೀಕೆಗಳೂ ಕೇಳಿಬರುತ್ತಿವೆ. ಆದರೂ ಅದನ್ನಾಧಾರಿತ ಮೌಲ್ಯಗಳಾದ, ಶೋಷಣ-ರಹಿತತೆ, ಜಾತ್ಯಾತೀತತೆ-ಧರ್ಮಾತೀತತೆ, ಪರಸ್ಪರ ಸಮಾನತೆ,, ಸೋದರತೆಗಳು ಅಂತೆಯೇ ಪ್ರಶ್ನಾತೀತ. ಈ ಮೌಲ್ಯಗಳ ಸ್ಪಂದನದಿಂದ ಮೂಡಿಬರುವ ಹೊಸ ಸಮಾಜದ ರೂಪಿಸುವಿಕೆಯ ಕನಸು ಬಸವಣ್ಣನದು. ಈ ದೃಷ್ಟಿಕೋನದಿಂದ ನೋಡಿದರೆ ಬಸವಣ್ಣನ ಜೀವಿತದ ಹೋರಾಟವು ಅವನನ್ನು ಸಮತಾವಾದದ ಅತಿರೇಕಿ ಎಂದು ನಿರೂಪಿಸುತ್ತದೆ. ಅದುವೇ ಕಾರಣ ಅವನು ತನ್ನ ಜೀವಿತ ಕಾಲದ ಪ್ರಚಲಿತ ವಿಚಾರ ಪ್ರಣಾಲಿಯಿಂದ ಎಂಟುನೂರು ವರುಷಗಳ ಮುಂದೆ ಓಡಿದ್ದನೆಂಬುದು ವೃಢಪಡುತ್ತದೆ. ಅವನ ಈ ವೈಚಾರಿಕ ಓಟಕ್ಕಿಂತ ಅಂದಿನ ಸಮಾಜವು ತೀರ ಹಿಂದುಳಿದಿದ್ದುದರಿಂದ ಅವನು ಅಗ್ರಾಹ್ಯನಾದುದು. ಅವನು ನಡೆ-ನುಡಿಗಳನ್ನು ಏಕೀಭವಿಸಿದನು. ಅವನ ಇರುವಿಕೆ ಹಾಗೂ ವಿಚಾರಧಾರೆಗಳು, ನಂಬುಗೆಗಳು ಅತೀವ ಪ್ರಗತಿಪರ; 20ನೆಯ ಶತಮಾನಕ್ಕಿಂತ ಅಧಿಕ ಪ್ರಗತಿಪರ. ಹೀಗಿದ್ದೂ ಅವನ ಅಭಿವ್ಯಕ್ತಿ ಕನ್ನಡ ಭಾಷೆಗೆ ವಿಚಾರಧಾರೆಗೆ ಧರ್ಮ-ಮತೀಯ ಸೋಂಕು ತಗುಲಿದುದರಿಂದ ಭಾರತದಿಂದ ಅದು ಹೊರಗೆ ಹೋಗಲಿಲ್ಲ. ಇಲ್ಲದೆ ಹೋಗಿದ್ದರೆ, ಕಾರ್ಲ್‌ಮಾರ್ಕ್ಸನ ಮುಖವನ್ನು ಈ ಜಗತ್ತು ಕಾಣದೆ ಹೋಗೂಬಹುದಿತ್ತು.

**ಮಾನವತಾವಾದದ ರಸಘಟ್ಟಿ :**

'ಕರ್ಮ' ವಾದವು 'ದೈವ' ವಾದದಲ್ಲಿ ಪರ್ಯವಸಾನ ಹೊಂದಿದ್ದ ಅಂದಿನ ಸಾಮಾಜಿಕ ನಕಾರಾತ್ಮಕ ನಂಬುಗೆಗಳನ್ನು ಕಿತ್ತೆಸೆಯಲು ಉಗ್ರವಾಗಿ ಹೋರಾಡಿದ ಬಸವಣ್ಣನ ಜೀವನವು ಸಾರ್ಥಕ. ನಕಾರಾತ್ಮಕ ನಂಬುಗೆಗಳ ಹಾಗೂ ಮೌಢ್ಯಗಳ ಕಾರಣಗಳನ್ನು ಹೆಕ್ಕಿ ತೆಗೆದು ಖಂಡಿಸಿದ. ''ಅಪನಂಬುಗೆಗಳೇ ಕ್ರೌರ್ಯಕ್ಕೆ ಕಾರಣ''ವೆಂಬ ವಾಲ್ಟೇರನ ಮಾತನ್ನು ಮನಂಬುಗುವಂತೆ ಬಿಂಬಿಸಿದನು. ಡಾಂಭಿಕರನ್ನು, ಮೋಸಗಾರರನ್ನು ನಿರಾಕರಿಸಿದನು. 'ಕರ್ಮ'ವಾದವನ್ನು ಬೇರೂರಿಸಿದ ಪುರಾತನ ವಿಧಿಕ್ರಮಗಳನ್ನೆಲ್ಲ, ಆಚರಣೆಗಳನ್ನೆಲ್ಲ ದೂರೀಕರಿಸಲು ಸವೆದುಕೊಂಡ, ಧರ್ಮ-ಅರ್ಥ-ಕಾಮ-ಮೋಕ್ಷಗಳಲ್ಲೆಲ್ಲ, ಲಿಂಗ ಭೇದವಿಲ್ಲದೆ ಸಮಾಜ ಸ್ಥಾನವನ್ನು ಕೊಡಮಾಡಿದ ಬಸವಣ್ಣನ ನಿಲುವು ಅಭೂತಪೂರ್ವವಾಗಿದೆ. ಮಾನವತಾವಾದವೊಂದನ್ನುಳಿದು ಎಲ್ಲ 'ವಾದ'ಗಳೂ ಮಾನವ ನಿರ್ಮಿತ. ಮಾನವತಾ ವಾದ ಹಾಗೂ ದೇವವಾದಗಳೆರಡೂ ಒಂದೇ ಎಂದು ಸಾರಿದ ಶ್ರೇಯಸ್ಸು ಅವನಿಗೆ ಸಲ್ಲುವದು. ಮಾನವ, ನಿಜಮಾನವನಾದರೆ ಅದುವೆ ದೇವತ್ವವೆಂದು ಉಸುರಿದ.

**ಕಾಮವೂ ಆಧ್ಯಾತ್ಮದ ಸೃಷ್ಟಿ :**

ಕಾಮ, ನಿಸರ್ಗದ ನಿರ್ಮಿತಿಯ ಮೂಲಧಾರ. ಕಾಮವನ್ನು ಹೀಗಳೆಯಲಾಗದು. ಕಾಮವು ತ್ಯಾಜ್ಯವಲ್ಲ. ಲೈಂಗಿಕತೆಯು ಶುದ್ಧ ಕಾಮದಲ್ಲಿ ರೂಪಿತವಾಗಬೇಕು. ಸೃಷ್ಟಿಯ ಮುಂದುವರಿಕೆಯು ಕಾಮಾಧಾರಿತವಾದುದು. ಕಾಮವಿಲ್ಲದಿದ್ದರೆ ಸೃಷ್ಟಿಯ ಕಾರ್ಯವೇ ನಿಲುಗಡೆ ಆದೀತು! ಈ ಭೂಮಿಯು ಬರಡಾದೀತು! ಆದರ್ಶಗಳು, ಮೌಲ್ಯಗಳು ಕಾಮ ವಿರೋಧಿಯಲ್ಲ. ಕಾಮವು ಭೌತಿಕತೆಯ ಬುನಾದಿ. ಭೌತಿಕತೆಯು ಆಧ್ಯಾತ್ಮಿಕತೆಯ ಅವಿಭಾಜ್ಯ ಅಂಗ. ಅಂತೆಯೇ ಕಾಮವೂ ಆಧ್ಯಾತ್ಮಿಕತೆಯಿಂದ ಬೇರ್ಪಡದು. ಕಾಮಾತುರ ಮಿಲನವೂ ಆಧ್ಯಾತ್ಮಿಕ ಮಿಲನ, ವಿಶ್ವಚೇತನಗಳೆರಡರ ಸಮ್ಮಿಲನ; ಎರಡು ಭಿನ್ನಲಿಂಗಿಗಳ ಮಿಲನ ಇದುವೇ ವಿಶ್ವದ ಚೇತೋಹಾರಿತನದ ಸಲ್ಲಕ್ಷಣ. ಬಸವಣ್ಣ, ತನ್ನ ವೈವಾಹಿಕ ಜೀವನದ ಮೂಲಕ, ಮಗುವೊಂದನ್ನು ಪಡೆಯುವ ಮೂಲಕ, ಇದನ್ನು ನಿದರ್ಶಿಸಿದನೆಂಬುದು ಒಪ್ಪಬೇಕಾದುದು.

'ಸನ್ಯಾಸ', 'ವೈರಾಗ್ಯ', 'ಬ್ರಹ್ಮಚರ್ಯ'ಗಳೆಂಬ ಸಂಸ್ಥೆಗಳು ಮಾನವ ನಿರ್ಮಿತ; ನಿಸರ್ಗ-ನಿರ್ಮಿತವಲ್ಲ; ಅಂತೆಯೇ ದೇವ ನಿರ್ಮಿತವೂ ಅಲ್ಲ. ಸೃಷ್ಟಿಯ ನಿಯಮಗಳನ್ನು ಉಲ್ಲಂಘಿಸುವ, ಕೃತ್ರಿಮವಾಗಿ ದೈವೀಕರಣ ಹೊಂದಿದ ಈ ಸಂಸ್ಥೆಗಳು ಸಾಮಾಜಿಕ ಸ್ವಾಸ್ಥ್ಯಕ್ಕೆ ಬಾಧಕವಾಗಿ ಕಾಲಕಾಲಕ್ಕೆ ನಿದರ್ಶನಗಳನ್ನೊದಗಿಸುತ್ತಿರುವುದನ್ನು ಕಾಣಬಹುದು. ಅಂತೆಯೇ ಬಸವ ವಿಚಾರ ಪ್ರಣಾಲಿಯಲ್ಲಿ ಇದಕ್ಕೆ ಸ್ಥಾನವಿಲ್ಲವೆಂದು ತೋರುತ್ತದೆ. ನಿಗ್ರಹಿತ ಪ್ರಾಪಂಚಿಕ ಜೀವನದ ಪ್ರಬಲ ಪ್ರತಿಪಾದಕನಲ್ಲದೆ, ಆತ್ಮನಿಗ್ರಹ, ಕ್ರಮಬದ್ಧತೆಗಳನ್ನು ಪೋಷಿಸಿದುದಕ್ಕೆ ಬಸವ ಜೀವನವೇ ಮಹೋನ್ನತ ಸಾಕ್ಷಿ. ಜೀವನದ ಮುಂದುವರಿಕೆಗೆ ಇದೊಂದು ಸಾಧನ ಮಾತ್ರ. ಆದರೆ ಇದೊಂದೇ ಜೀವನವಲ್ಲವೆಂಬುದರಲ್ಲಿ ಬಸವನು ನಂಬಿದ್ದನೆಂಬುದು ನಿರ್ವಿವಾದ.

**ಶ್ರಮಗೌರವಕ್ಕೆ ಆದ್ಯ ಪ್ರಾಶಸ್ತ್ಯ ಹಾಗೂ ಶೋಷಣೆಯೊಂದು ಅಪರಾಧ :**

ಇಂದಿನ, ಅಂದಿನ, ಸಮಾಜದ ಮೂಲ ಕೇಡಾದ ಶೋಷಣೆ, ಆರ್ಥಿಕ ಅಸಮಾನತೆ ಮುಂತಾದವು ಮೂಲಭೂತವಾಗಿ ವ್ಯಕ್ತಿಯ ಅಧೋಗತಿ ಹಾಗೂ ಸಾಂಘಿಕ ಜೀವನದ ಅಧೋಗತಿಗೆ ಕಾರಣವೆಂಬುದು ಸ್ವಯಂಸಿದ್ಧವಾದುದು. ಈ ಅನಿಷ್ಟಗಳ ದೂರೀಕರಣವೇ ಬಸವ ಜೀವನದ ಸಂದೇಶವೇನೋ ಎನ್ನುವಷ್ಟರ ಮಟ್ಟಿಗೆ ಅವುಗಳಿಗ ಅಗ್ರಪ್ರಾಶಸ್ತ್ಯವಿತ್ತುದು ಸುಸ್ಪಷ್ಟವಿದೆ. ನಿತ್ಯವೂ ದೈಹಿಕ ಶ್ರಮದ ಮಡಿಮೆಯಿಂದಲೇ ನಿತ್ಯದ ಆಹಾರಕ್ಕೆ ಅರ್ಹತೆ ದೊರೆಯುವದು; ಮಡಿಮೆಯಲ್ಲಿ ಮೇಲು-ಕೀಳುಗಳಿಲ್ಲ. ನಿತ್ಯದ ಅಗತ್ಯಕ್ಕಿಂತ ಹೆಚ್ಚಿನ ಗಳಿಕೆಯಲ್ಲಿ ಇನ್ನೊಬ್ಬನ ಅಗತ್ಯದ ಹರಣವಿದೆ. ಕಾರಣ ಅದು ಅಪರಾಧ. ಆಕಸ್ಮಿಕವಾದ ಅಧಿಕ ಗಳಿಕೆಯು ಸಮಾಜದಲ್ಲಿ ಹಂಚಿಹೋಗಿ ಸಮಾಜದ ಸೊತ್ತಾಗಬೇಕು; ಸಾಂಘಿಕ ಕಾರ್ಯಗಳಿಗೆ ವಿನಿಯೋಗವಾಗಬೇಕು. ನಿಸರ್ಗದ ನಿರಂತರ ನಿರ್ಮಾಣ ಹಾಗೂ ಕೊಡುಗೆಗಳಲ್ಲಿ ವ್ಯಕ್ತಿಯ ಪಾಲು, ಅವನ ಅಸ್ತಿತ್ವದ ಅವಶ್ಯಕತೆಗಳಿಗೆ ಮಾತ್ರ ಸೀಮಿತಗೊಳ್ಳಬೇಕು. ಹಿಗಾದರೆ ಮಾತ್ರ ಮಾನವೀಯತೆಯ ದ್ಯೋತಕವಾದ ಪರಸ್ಪರ ಪ್ರೀತಿ-ವಿಶ್ವಾಸ-ದಯೆ ಅನುಕಂಪಗಳು ಸ್ಫುರಿತಗೊಳ್ಳುವವು. ಇವುಗಳಲ್ಲಿ ಬಸವ ತತ್ತ್ವಗಳು ಕೆನೆಗಟ್ಟಿ ನಿಂತಿವೆ. ಈ ತೆರನಾಗಿ ಬಸವಣ್ಣನು ಇಂದಿನ ವಿಶ್ವಮಾನ್ಯ ವಿಚಾರಗಳ ಸಾಕಾರ ರೂಪವನ್ನೇ ತಾಳಿದ್ದನು. ಅಂದು ಇದನ್ನೆಲ್ಲ ಬದುಕಿ ಅಭಿವ್ಯಕ್ತಿಗೊಳಿಸಲು, ಸಾಕಾರ ರೂಪವನ್ನೇ ತಾಳಿದ್ದನು. ಅಂದು, ಇದನ್ನೆಲ್ಲ ಬದುಕಿ ಅಭಿವ್ಯಕ್ತಿಗೊಳಿಸಲು ರೋಷ, ರಭಸ, ದಯೆ-ವಿನಯ, ನಮ್ರತೆ-ಕಠೋರತೆ, ಖಂಡನೆ-ಮಂಡನೆ, ಸೋದಾಹರಣಗಳನ್ನೇ ಬಳಸಿದುದನ್ನು ಅವನ ವಚನಗಳುದ್ದಕ್ಕೂ ಧಾರಾಳವಾಗಿ ಕಾಣಬಹುದು.

**ಜಾತ್ಯಾತೀತತೆ ಹಾಗೂ ಅಂತರ್ಜಾತೀಯತೆ :**

ಹುಟ್ಟಿನಿಂದ ಜಾತಿ ನಿರ್ಧಾರವಲ್ಲ. ಆಚರಣೆ ಮತ್ತು ಕೃತಿಗಳಿಂದ ಜಾತಿ ನಿರ್ಧಾರವಾಗುವದು. ಏಕೆಂದರೆ ಮಾನವನಿಂದಲೇ ನಿರ್ಮಿತವಾದ 'ಜಾತಿ' ಸಂಸ್ಥೆಗೆ ಅಂದಿನ ಸಮಾಜವು ಸಂಪೂರ್ಣವಾಗಿ ಶರಣಾಗತವಾದ ಕಾಲವದು. ಹೆಣ್ಣು-ಗಂಡುಗಳೆಂಬ ಎರಡೇ ಜಾತಿಗಳನ್ನು ನಿಸರ್ಗವು ನಿರ್ಮಿಸಿದೆ. ವರ್ಣಾಶ್ರಮ ಧರ್ಮದಿಂದಾಗಿ ನಿರ್ಮಿತವಾದ 'ಜಾತಿ' ಸಂಸ್ಥೆಗಂ ಕೊಡಲಿ ಏಟನ್ನು ಹಾಕಲು ನಿರಂತರವಾಗಿ ಹೋರಾಡಿದ ಬಸವಣ್ಣ, ಇದರ ಕಾರ್ಯಾಚರಣೆಗೆ, ಎಲ್ಲರಿಗೂ ಲಿಂಗಧಾರಣೆಯ ಆಸ್ಪದವನ್ನು ಕಲ್ಪಿಸಿದನು. ಲಿಂಗಧಾರಣೆ ಮಾಡಿದವನಿಗೆ ಯಾವ ಜಾತಿಯ ಸಂಬಂಧ ಇಲ್ಲವೆಂಬ ನೂತನ ವಿಚಾರವನ್ನು ಪ್ರಚುರಗೊಳಿಸಿದನು (ದುರ್ದೈವದಿಂದ ಲಿಂಗದಾರಣ ಮಾಡಿದವರೆಲ್ಲ ಒಂದು ಜಾತಿಯ ಸಂಕೇತವೆಂದು ಇಂದು ಪರಿಗ್ರಹಿಸಲಾಗಿದೆ). ಈ ದಿಟ್ಟ, ಸ್ಪಷ್ಟವಾದ ನಿಲುವಿನ ಹಿನ್ನೆಲೆಯಲ್ಲಿ ಹರಳಯ್ಯ-ಮಧುವರಸರ ರಕ್ತ ಸಂಬಂಧವು ಜಾತ್ಯಾತೀತತೆಯ ನಿದರ್ಶನವೇ ಆಗುವದಲ್ಲದೆ ಅಂತರ್‌ಜಾತೀಯ ವೈವಾಹಿಕ ಸಂಬಂಧ ಎಂದು ಅರ್ಥೈಸುವ ಸಮಂಜಸತೆಯು ಪ್ರಸ್ತುತತೆಯನ್ನು ಕಳೆದುಕೊಳ್ಳುತ್ತದೆ. ಈ ನಿಲುವ ಸ್ಪಷ್ಟ, ನ್ಯಾಯಬದ್ಧ ಅರ್ಥೈಸುವ ಕೊರತೆಯಿಂದಾಗಿ ಅಂದು ವೈಚಾರಿಕ ತುಮುಲವು ಸಮಾಜವನ್ನು ಆವರಿಸಿ ಹಿಂಸೆಯ ರೂಪವನ್ನು ತಾಳಿತು. ಈ ವೈಚಾರಿಕ ಭೂಮಿಕೆಯು ಬಸವಣ್ಣನವರ ಸ್ವಂತದ ಎರಡೂ ವಿವಾಹಗಳಿಗೆ ಸಂದೇಹಾತೀತವಾಗಿ ಅನ್ವಯವಾಗುವುದು. (ಏಕೆಂದರೆ, ಬಸವಣ್ಣನ ಸೋದರ ಮಾವನ ಮಗಳಾದ ಗಂಗಾಂಬಿಕೆಯು ಶೈವ ಬ್ರಾಹ್ಮಣಗಳಾಗಿಯೇ ಇದ್ದಿರಬಹುದು. ಅಲ್ಲದೆ ನೀಲಲೋಚನೆಯೂ ಶೈವ ಬ್ರಾಹ್ಮಣಳೋ, ಜೈನಳೋ ಆಗಿದ್ದಿರಬಹುದು.)

**ಲಿಂಗಧಾರಣೆಯ ಮೂಲಗ್ರಹಿಕೆ (Concept) :**

ಲಿಂಗಧಾರಣೆಯು ಜಾತ್ಯಾತೀತತೆಯ ದ್ಯೋತಕವೆಂದು ಅರ್ಥೈಸಿದುದು, 'ಲಿಂಗ'ದ ಅರ್ಥವನ್ನೂ ಆಹ್ವಾನಿಸುವದು. ಲಿಂಗವೆಂದರೆ 'ತನ್ನ' (ಮಾನವನ) ಪ್ರತಿಬಿಂಬ ಲಿಂಗದ ರೂಪದಲ್ಲಿ ತನ್ನ ಆರಾಧನೆಯೇ ಲಿಂಗಾರಾಧನೆ ಲಿಂಗವು ತನ್ನಿಂದ ಬೇರ್ಪಡದು. ಲಿಂಗವೇ ತಾನು; ಅದುವೇ ಇಷ್ಟಲಿಂಗ. ಲಿಂಗವು ವಿಶ್ವಚೇತನ; ವಿಶ್ವದ ಮೂರ್ತ ಸ್ವರೂಪ. ಮಾನವನು ಕೂಡ ವಿಶ್ವವೇ ಸಾಕಾರಿಸಿದ ಮೂರ್ತ ಸ್ವರೂಪ. ಅಂತೆಯೇ ವಿಶ್ವವು ಮಾನವನ ವಿಸ್ತೃತರೂಪ ಮಾನವನೇ ಸಂಕ್ಷಿಪ್ತ ಬ್ರಹ್ಮಾಂಡ ಅಥವಾ ವಿಶ್ವ. ಇಂಥ ಚೇತನ ಸ್ವರೂಪಿಯಾದ ಲಿಂಗವು ಜಡವೆಂತಾದೀತು? ಈ ವಿಶ್ವದಲ್ಲಿ ಯಾವುದೂ ಜಡವಲ್ಲ. ಜಡವೆಂದು ಮಾನವನಿಗೆ ಗೋಚರಿಸುವುದೆಲ್ಲವೂ ಚೇತನಾಂತರ್ಗತ ಜಡ. ಹೀಗಾಗಿ ಜಡವೆಂದು ತೋರುವ ಇಷ್ಟಲಿಂಗವೂ ಚೇತನಯುಕ್ತವಾದುದು; ಅದೂ ವಿಶ್ವಚೇತನದ ಮೂರ್ತರೂಪ. ಹೀಗೆ ವಿಶ್ವಚೇತನದ ಅವಿಭಾಜ್ಯ ಅಂಶ ಮಾನವ ಹಾಗೂ ಲಿಂಗ. ಕಾರಣ ಮಾನವ ಹಾಗೂ ಲಿಂಗಗಳಲ್ಲಿ ಭೇದವಿಲ್ಲ. ಅಂತೆಯೇ ಲಿಂಗಧರಿಸಿದ ಮಾನವನು ಲಿಂಗ ಸ್ವರೂಪಿ. ತನ್ನ ಕುರುಹಾಗಿ ಲಿಂಗವು ಮಾನವನೊಂದಿಗೆ





ಸಮರಸಗೊಂಡು, ಎಲ್ಲ ಪ್ರಭೇದಗಳ ಅಳಿವಿನ ದಾರಿ. ಈ ದಿಸೆಯಲ್ಲಿ ಲಿಂಗಧಾರಣೆಯು ಜಾತ್ಯಾತೀತತೆಯ ಧರ್ಮಾತೀತತೆಯ ಸಂಕೇತವಲ್ಲದೆ ದೇಹಾತೀತತೆಯ ಪ್ರತೀಕವೂ ಹೌದು. ಬಸವ ತತ್ತ್ವಜ್ಞಾನದ ಜೀವನಾಡಿಯಿದು.

**ಅಪೂರ್ವ ಕ್ರಾಂತಿಯ ಕಹಳೆ :**

ತನ್ನ ಪ್ರತೀಕವಾದ ಲಿಂಗಪೂಜೆಯು, ವಿಶ್ವಚೇತನದ ಅವಿಭಾಜ್ಯ ಅಂಗದ ಆರಾಧನೆಯಾದುದರಿಂದ ತನ್ನ ಹೊರತು ಇತರರನ್ನು ಪೂಜಿಸುವದು ಅರ್ಥಶೂನ್ಯ ಅಲ್ಲದೆ ಅನರ್ಹ. ನಿಸರ್ಗದ ನಿಯಮದಂತೆ ಹಸಿವು, ನಿದ್ರೆ, ಮೈಥುನ ಮುಂತಾದವುಗಳು ತಾನೇ ತಣಿಸಿಕೊಳ್ಳಬೇಕಾದ ಅನಿವಾರ್ಯ ಕ್ರಿಯೆಗಳಂತೆ ತನ್ನ ಆರಾಧನೆಯನ್ನು ತಾನೇ ಮಾಡಿಕೊಳ್ಳಬೇಕೆಂಬ ಕ್ರಾಂತಿಕಾರಿಯಾದ ಆಚರಣೆಯನ್ನು ಘೋಷಿಸಿ, ಪುರೋಹಿತಸಾಹಿಯ ನಿರ್ನಾಮದ ಕಹಳೆಯನ್ನು ಮೊಳಗಿಸಿದನು. ಹೀಗೆ ಪುರೋಹಿತಶಾಹಿ, ಬಂಡವಾಳಶಾಹಿ ಮತ್ತು ಅಧಿಕಾರಶಾಹಿಗಳನ್ನು, ಸ್ವಂತದ ಆಚರಣೆಯ ಉದಾಹರಣೆಯ ಮೂಲಕ ನಿರಾಕರಿಸಿದುದಲ್ಲದೆ, ಆ ನಿರಾಕರಣೆಯನ್ನು ಬೇರೂರಿಸಲು ನಿರಂತರವಾಗಿ ಹೋರಾಡಿದನು. ಈ ಮೂರು 'ಶಾಹಿ'ಗಳನ್ನು ಏಕಕಾಲಕ್ಕೆ ದಮನ ಮಾಡಲು ಬಸವಣ್ಣನು ಹೂಡಿದ ಹೋರಾಟವು, ಮಾನವ ಕುಲದ ಇತಿಹಾಸದಲ್ಲಿಯೇ ಅಪೂರ್ವವಾದ ಸಾಹಸವೇ ಸರಿ.

**ಜಂಗಮ....ಏನು ?**

ಬಸವಣ್ಣನು ಸ್ಥಾವರಕ್ಕಳಿವುಂಟು. ಜಂಗಮಕ್ಕಳಿವಿಲ್ಲವೆಂದು ನುಡಿದನು. ದೇಹದ ಹೊರಗೆ ಪ್ರತಿಷ್ಠಾಪಿತವಾದ ಅಗಣಿತ ಲಿಂಗಗಳು, ಮೂರ್ತಿಗಳು, ಗುಡಿ-ಗುಂಡಾರಗಳಿಗೆ ಅಳಿವುಂಟು, ಜಂಗಮ ರೂಪಿಯಾದ 'ಲಿಂಗ' ನಂಬುಗೆಗೆ ಅಳಿವಿಲ್ಲ. 'ಜಂಗಮ' ರೂಪವೆಂಬುದು ಸಾಮಾನ್ಯವಾಗಿ ತಪ್ಪು ಗ್ರಹೀತವಾದುದೇ ಆಗಿದೆ. ಮಠಾಧೀಶ, ಸ್ವಾಮಿ, 'ಕಾವಿ'ಯನ್ನು ಧರಿಸಿದವರು ಜಂಗಮರಲ್ಲ. 'ಜಂಗಮ'ವೆಂಬುದು ಆಧ್ಯಾತ್ಮಿಕ ನಿಲುವು. ವಿಶ್ವಚೇತನದ ಮೂರ್ತ ರೂಪದ ನಿಲುವು. ಲಿಂಗ-ಜಂಗಮವೆಂಬುವು ಒಂದರಿಂದ ಒಂದು ಬೇರ್ಪಡಲಾರವು. ಈ ಏಕ ರೂಪತೆಯ ನಿರಂತರ ಸಾಧಕನಾಗಿದ್ದನು ಬಸವಣ್ಣನು.

**ಆಚರಣೆಗಳ ದುರದೃಷ್ಟತೆ :**

ಧರ್ಮಾಚರಣೆ, ದೇವಾರಾಧನೆಗಳೆಂಬ ಮುಖವಾಡದಲ್ಲಿ ಅನೀತಿಯ, ಹಿಂಸೆಯ ತಾಂಡವವಾದುತ್ತಿದ್ದುದು ಬಸವಣ್ಣನ ಮನಸ್ಸನ್ನು ಕಲುಕಿತು, ಅಳುಕಿತು. ಈ ದೃಷ್ಟಿಯಿಂದ ಜಗದ ಯಾವುದೇ ಪುರಾಣ-ಪುಣ್ಯ ಕಥೆಗಳು ಅನೀತಿ, ಹಿಂಸೆಯ ಹಾಸುಹೊಕ್ಕಿಂಬಂತೆ ಧ್ವನಿತಗೊಳ್ಳುತ್ತವೆ. ಬಸವಣ್ಣ ಸಿಡಿದೆದ್ದು ದಯೆಯೇ ಧರ್ಮದ ಮೂಲವೆಂದು ಸಾರಿದನು. ಕಿಚ್ಚಿನಲ್ಲಿ (ಯಜ್ಞ-ಹೋಮದ ಬೆಂಕಿಯಲ್ಲಿ) ಉಚ್ಚೇ ಹೊಯ್ಯಿರೋ ಎಂದು ಕಿಚ್ಚಿನಿಂದ ಆರ್ಭಟಿಸಿದನು. ಇದೇ ಹಿನ್ನೆಲೆಯಲ್ಲಿ 'ವೇದವನು ಓದುವವರ ಮೂಗ ಕೊಯ್ಯುವೆನು' ಎಂದು ಸಾತ್ವಿಕ ಸೇಡಿನ ಮನೋಭಾವವನ್ನು ವ್ಯಕ್ತಿಗೊಳಿಸಿದನು. ದೇವ ಸಂತೃಪ್ತಿಗಾಗಿ, ದೇವನಲ್ಲಿಯ ದುಷ್ಟಶಕ್ತಿಯ ಉಪಶಮನಕ್ಕಾಗಿ ಮಾನವ ಬಲಿ. ಪ್ರಾಣಿ ಬಲಿಗಳು ಜನಪ್ರಿಯವಾದ ಕಾಲವದು. ಬಸವನ ಅಂದಿನ ಅಹಿಂಸಾದೀಕ್ಷೆಯನ್ನು ಅವನ ಕಾಲಾವಧಿಯಲ್ಲಿಯೇ ಮಣ್ಣುಗೂಡಿಸಿದ ಮಾನವ ಸಮಾಜವಿದು. ಅಂದಿನ ಬಸವ ಬೋಧನೆಯ ಕ್ರೂರ ಪರಿಹಾಸ್ಯವು ಇಂದಿಗೂ ಸಮಾಜದಲ್ಲಿ ಕಾಣಸಿಗುವದು: ಶಾಸನಬದ್ಧವಾಗಿ ಇದನ್ನು ಬಹಿಷ್ಕರಿಸಿದರೂ, ಜನಮನದ ಮೌಢ್ಯವನ್ನು ದಮನಗೊಳಿಸಲು ಪ್ರಾಣಿಯನ್ನು ಕೊಲ್ಲದಿದ್ದರೂ ಅದರ ರಕ್ತವನ್ನು ತೆಗೆದು ಬಲಿಕೊಡಿಸಿದ ಇತ್ತೀಚಿನ ಕ್ರಮವೊಂದು ಇದಕ್ಕೆ ಸಾಕ್ಷಿಯಾಗಿದೆ. ಇಂಥ ಬಲಿಕೊಡುವ ಸೌಮ್ಯ ವಿಧಾನವೇ, ಗುಡಿ-ಗುಂಡಾರಗಳಲ್ಲಿ ತೆಂಗಿನಕಾಯಿ, ಹಣ್ಣು-ಹಂಪಲು (ಅವೂ ಸಜೀವನೆಂಬುದನ್ನು ತಿಳಿದು) ಗಳನ್ನು ಬಲಿಕೊಡುವ ಸಂಪ್ರದಾಯಬದ್ಧ ಜನಪ್ರಿಯ ಪ್ರಚಲಿತತೆಯಲ್ಲಿ ಚಿರಸ್ಥಾಯಿಯಾಗಿ ಉಳಿದಿದೆ. ಹೀಗೆ, ಮಹಾಮಾನವ ಬಸವಣ್ಣನು ದುಷ್ಟತೆಯ ಅಲೆಗಳಲ್ಲಿಯೂ ಇಂದಿಗೂ ಉಳಿದುಕೊಂಡುದು ನಿಜವಾಗಿಯೂ ಪವಾಡ ಸದೃಶವಾಗಿದೆ.

**'ಪವಾಡ'ದ ವಿಚಾರ :**

ಪವಾಡಗಳನ್ನು ಖಂಡಿಸಿದನು ಬಸವಣ್ಣ. ಅಂಥವನ ಸುತ್ತಲೂ ಪವಾಡಗಳನ್ನು ಹೆಣೆದು ಅವನನ್ನು ಹೆಡಮುರಿಗೆ ಕಟ್ಟಿ ಬಂಧಿಸಿಟ್ಟ ಸಮಾಜವಿದು. ತತ್ತ್ವಶಾಸ್ತ್ರದ ದೃಷ್ಟಿಯಿಂದ ಪವಾಡವು ಆಧ್ಯಾತ್ಮಿಕ ಸಾಧನೆಯಾಗಲಾರದು. ಅದೊಂದು ಸಿದ್ಧಿಯೆಂದು ಬಗೆದರೆ ಕೀಳು ಸಾಧನೆಯೆಂದು ವೈಚಾರಿಕರು, ವಿದ್ವಾಸಂರು ಬಗೆದಿರುವರು.

**ಭಕ್ತಿಯ ದ್ವಂದ್ವ :**

ಬಸವಣ್ಣನು ಹೀಗೆ ಹೊಸ ಸಮಾಜಸೃಷ್ಟಿಯ ದುಷ್ಕಾರ: ಅದಕ್ಕಾಗಿ ಸಮರ್ಥ ರೀತಿಯಿಂದ ತನ್ನನ್ನು ತಾನೇ ಅರ್ಪಿಸಿಕೊಂಡುದಂತೂ ವಾಸ್ತವಿಕತೆಯ ಒಪ್ಪಿಗೆ. ಅಂಥ ಸಮಾಜ ಸೃಷ್ಟಿಯ ರೂವಾರಿಯಾಗುವ ಚಿರನೂತನ ಹೋರಾಟದಲ್ಲಿ ತಾನೇ ಸಮರ್ಪಿತನಾದ ಮಹಾನುಭಾವ. ಸಾಮಾಜಿಕ ಪುನರ್ರಚನೆಯ ಎಲ್ಲ ವಿಶ್ವವಿಖ್ಯಾತ ಹೋರಾಟಗಳಲ್ಲಿ ಬಸವಣ್ಣನು ಎಂದೆಂದಿಗೂ ಪ್ರಸ್ತುತ. ಆದರೆ ಅವನ ಭಕ್ತಿಭಂಡಾರಿ ಬಿರುದು ದ್ವಂದ್ವಕ್ಕೆ

ಆಸ್ಪದನೀಯ. ಅವನ ಭಕ್ತಿಭಂಡಾರವು ಪ್ರಶ್ನಾತೀತವಾದರೂ, ಬಸವಣ್ಣನು ತನ್ನಲ್ಲಿ ತಾನೇ ಭಕ್ತಿಯನ್ನು ಜೀವನಪರ್ಯಂತ ತೋರ್ಪಡಿಸಿದನೋ. ಇಲ್ಲವೆ ವಿಶ್ವಚೇತನದ ಸಾಕಾರ ರೂಪವೆಂದು ಬಗೆದು ಕೂಡಲಸಂಗಮದೇವನಿಗೆ ತನ್ನ ಭಕ್ತಿ ಭಂಡಾರವನೆಲ್ಲ ಧಾರೆಯೆರೆದನೋ ಎಂಬ ವೈಚಾರಿಕ ಸಂಧಿಗ್ಧತೆಯಲ್ಲಿ (Crisis) ವಿಚಾರವಾದಿಗಳು, ಆಧ್ಯಾತ್ಮವಾದಿಗಳು ಸಿಕ್ಕು ಬೀಳುತ್ತಾರೆ. ಆತ್ಮಚರಿತ್ರೆಯನ್ನು ಬರೆಯುವ ಅವಕಾಶವು ಅವನಿಗೆ ಅನುಕೂಲಗೊಂಡಿದ್ದರೆ ಯಾವ ತಾರ್ಕಿಕ ಸಂದೇಹ-ತಾಕಾಟಗಳಿಗೆ ಅನುವು ಇರುತ್ತಿರಲಿಲ್ಲ. ಏಕೆಂದರೆ ಅಲ್ಲಮ ಪ್ರಭುವಿನಂಥವರ ನಿರ್ಧಾರದ ನಿಲುವಿನ ಕೊರತೆಯು ಇಲ್ಲಿ ಮಿಂಚಿ ಮಾಯವಾಗುವದು. ''ನಾ ದೇವನಲ್ಲದೆ ನೀ ದೇವನೆ?'' ಎಂಬ ಅಲ್ಲಮಪ್ರಭುವು ತಾನೇ ದೇವನೆಂಬುದನ್ನು ಸ್ವಯಂ-ಸ್ಪಷ್ಟಗೊಳಿಸಿ ಅದ್ವೈತದ-ಪರಿಪೂರ್ಣತೆಯಾಗಿ ಪ್ರಕಟಗೊಂಡಿದ್ದಾನೆ. ದೇವಮತ್ತತೆಯು (God Intoxication) ಅಕ್ಕಮಹಾದೇವಿಯ ಇರವು, ಅರಿವು, ನಿರವಯಗಳಲ್ಲಿ ಖಚಿತಗೊಳ್ಳುತ್ತದೆ. ಈ ದೇವಮತ್ತತೆಯ ಅಂಶಿಕ ಅವಿರ್ಭಾವ ಮಾತ್ರ ಬಸವಣ್ಣನಲ್ಲಿ ತೋರುವದು.

ದ್ವೈತ-ಅದ್ವೈತಗಳ ದ್ವಂದ್ವವು ಜನಸಾಮಾನ್ಯನನ್ನು ಗೊಂದಲಕ್ಕೀಡು ಮಾಡುತ್ತಿರುವಂತೆ ಬಸವಣ್ಣನ ಜೀವನವೆಲ್ಲ ಈ ಜಂಜಾಟದಿಂದ ಮುಕ್ತಗೊಳ್ಳುವ ವಿಧಾನಗಳ ಅರಸುವಿಕೆಯೇ ಆಗಿತ್ತೇನೊ ಎಂದು ಭಾಸಗೊಳ್ಳುವದು. ಹರಿಹರನ ಬಸವನ ದೇವರಾಜರಗಳೆಯು ಅವನ ಭಕ್ತಿಯ ಪರಾಕಾಷ್ಠತೆಯ ಬಣ್ಣನೆಯಿಂದ ಕೂಡಿರುವುದಲ್ಲದೆ, ಅವನು ಕೂಡಲಸಂಗಮನನ್ನು ಪೂಜಿಸುವ ವಿಧಾನವು ಮನಂಬುಗುವಂತೆ ಸ್ಫುಟಗೊಂಡಿದೆ. ಬಸವಣ್ಣನ ಎಷ್ಟೋ ವಚನಗಳೂ 'ದೇವ' ಹಾಗೂ 'ತಾನು' ಎಂಬ ದ್ವೈತ ಭಾವವನ್ನು ಮೂಡಿಸುತ್ತವೆ. ಹೀಗೆ ಈ ವೈಚಾರಿಕ ಮಾಯೆಯು ಬಸವಣ್ಣನನ್ನೂ ಸುತ್ತಿ, ಅದರ ತಾಕಲಾಟದಲ್ಲಿ ಅವನು ಕುದಿದು ಬೆಂದುಹೋಗಿರಬಹುದು. ಏಕೆಂದರೆ, ಬಸವಣ್ಣನು ಐಕ್ಯದ ನಿರ್ಧಾರಕ್ಕೆ ನಿಲುಕಿದಾಗ ಈ ಜಗದ ಜಂಜಡದಿಂದ ತನ್ನನ್ನು ಮುಕ್ತಗೊಳಿಸಿಕೊಂಡು ದೇವನಲ್ಲಿ ತಾನು ಲೀನಗೊಳ್ಳಬೇಕೆಂಬ ಆರ್ತನಾದ ಬಸವಣ್ಣನಿಂದ ಹೊಮ್ಮುತ್ತದೆಂಬುದಕ್ಕೆ ಅವನ ವಚನವೇ ಸಾಕ್ಷಿ. ಈ ಜಗದಾಳದಿಂದ ಮೂರ್ತಗೊಂಡ ಮಹಾಮಾನವರೆಲ್ಲರೂ ತಮ್ಮ ಜೀವನದ ಕೊನೆಗೆ ಮಾನಸಿಕ ವಿಪ್ಲವಕ್ಕೆ ತುತ್ತಾಗಿರುವದು ನಾಗರಿಕತೆಯ ಇತಿಹಾಸದ ಸಂಪುಟಗಳಲ್ಲಿ ನಿವೇದಿತವಾಗಿದೆ. ಅಂಥ ನಿವೇದನೆಗಳಲ್ಲಿ ಬಸವಣ್ಣನ ಹೆಸರು ಶಾಶ್ವತ.

**ಉಪಸಂಹಾರ :**

ಇದೊಂದು ಮಾನವಮನದ ವಿಚಿತ್ರ ಸ್ಥಿತಿ, ಸಂಕಟಮಯ ಹಂತ. ಮಾನವನು ಭೂಮಿಯ ಮೇಲೆ ಅವತರಿಸಿದಂದಿನಿಂದ ಈ ಮಾನಸಿಕ ಸಂಕಟಕ್ಕೆ ಒಳಗಾಗುತ್ತಲೇ ಇದ್ದಾನೆ. ಎಲ್ಲ ಮಾರ್ಗಗಳನ್ನು ಭಕ್ತಿ, ವಿಚಾರ, ಆಚಾರ, ಕರ್ಮ, ಯೋಗ, ಜ್ಞಾನ, ವಿಜ್ಞಾನ, ನೀತಿ, ಧರ್ಮ, ತತ್ವಶಾಸ್ತ್ರ, ಆಧ್ಯಾತ್ಮ ಮುಂತಾದ ಜೀವನದುದ್ದಕ್ಕೂ ಅನುಸರಿಸಿ, ತುಂಬು ಬದುಕನ್ನು ಬಾಳಿದ ಎಲ್ಲ ಮಹಾಮಾನವರೂ ಜೀವನದ ಮೂಲಭೂತ ಪ್ರಶ್ನೆಗಳಿಗೆ ನಿರುತ್ತರರು. ತಮ್ಮ ಅಂತಿಮ ವೈಯಕ್ತಿಕ ನಂಬುಗೆಯ ದಾಖಲೆಗಳನ್ನು ನಿರ್ಮಿಸಿ ನಿರ್ಗಮಿಸಿದವರು. ಜೀವನ, ಚಲನ, ಚೇತನ, ಹಾಗೂ ಮರಣಗಳ ಬಗ್ಗೆ ಯಾವ ಚಿಂತನೆಯೂ ಸಾಲದು; ಯಾರ ಚಿಂತನವೂ ಸೀಮಾರಹಿತವಾದುದಲ್ಲ. ಈ ಆದಿ-ಅಂತ್ಯವಿಲ್ಲದ ಪ್ರಶ್ನೆಗಳಿಗೆ ಮಾನವ ಉತ್ತರಿಸಬಲ್ಲನೇ? ಏಕೆಂದರೆ ಈ ಪ್ರಶ್ನೆಗಳೆಲ್ಲವೂ ಮಾನವನ ರಹಸ್ಯಮಯ ಸೃಷ್ಟಿ. ಈ ನಿಗೂಢತೆಯು, ಮಾನವನ ವಿಕಾಸದಲ್ಲಿ ಇನ್ನೂ ಅಧಿಕವಾಗಿ ಜಟಿಲಗೊಳ್ಳುವುದೆಂಬುದು ಸಂದೇಹಾತೀತ. ಈ ಸಂದೇಹವನ್ನು ಎತ್ತಿಕೊಂಡು ಜೀವನವನ್ನು ಸವೆಯಿಸಿದವರೇ ಮಹಾಮಾನವರು. ಬುದ್ಧಿ, ವಿವೇಕ, ಚಿಂತನೆಗಳನ್ನು ಬಡಿದೆಬ್ಬಿಸಿಕೊಂಡು, ಸತ್ಯವನ್ನು ಸಾಕ್ಷಾತ್ಕರಿಸಿಕೊಳ್ಳುವಲ್ಲಿ ಜರ್ಜರಿತವಾಗಿ ಹೋದವರೇ ಮಹಾ ಮಾನವರು. ಜಗದ ಜೀವಿಗಳ ಇಂಥ ಸಾಲುಗಳಲ್ಲಿ, ಜಗದ ಜೀವಿತದ ಮರಳಿನಲ್ಲಿ ಅಳಿಸಿಹೋಗದ ಹೆಜ್ಜೆ ಮೂಡಿಸಿದ ಮಹಾಮಾನವ ಬಸವಣ್ಣ.

ವಾಸ್ತವ ಜೀವನ ಪ್ರಣೀತನಾದ ಆದರ್ಶವಾದಿ, ದ್ವೈತ, ಅದ್ವೈತದ ದ್ವಂದ್ವದಿಂದ ಉಂದಯಿಸಿದ ಆಧ್ಯಾತ್ಮವಾದಿ, ವೈಚಾರಿಕ ಪ್ರಗಲ್ಭತೆಯಿಂದ ಕೂಡಿದ ವಿಚಾರವಾದಿ, ಸದಾಕಾಲವೂ ಚಿರನೂತನವಾಗಿರುವ ಮಾನವತಾವಾದಿ ಬಸವಣ್ಣ. ಇಂಥ ವ್ಯಕ್ತಿತ್ವಗಳನ್ನು ಈ ಭೂಮಿಯು ಕಾಣುವುದು ವಿರಳ. ಮಾನವ ಕುಲದ ಸ್ವಯಂ-ನಾಶದ ಅಂಚಿನಿಂದ, ಉಳಿವಿಗಾಗಿ ಇಂಥ ವ್ಯಕ್ತಿತ್ವಗಳೇ ಮಾರ್ಗದರ್ಶಕ, ಈ ದಾರಿದೀಪಗಳ ಮುಂಬೆಳಗು ನಮ್ಮಲ್ಲಿರುವ ದೀಪ್ತಿಯನ್ನು ಪ್ರಖರಗೊಳಿಸಿ ನಾವೂ ಮಹಾ ಮಾನವರಾಗುವಂತೆ ಪ್ರೇರೇಪಿಸಲಿ !





# ಕನ್ನಡದಲ್ಲಿ ವೀರಶೈವ ಸಾಹಿತ್ಯ

- ಡಾ. ಗುರುಲಿಂಗ ಕಾಪಸೆ
ಧಾರವಾಡ

ಸುದೀರ್ಘಕಾಲದ ಇತಿಹಾಸವುಳ್ಳ ಕನ್ನಡ ಸಾಹಿತ್ಯವನ್ನು ಆಯಾ ಕಾಲದ ವಿಶೇಷತೆಗಳನ್ನು ಗಮನಿಸಿ, ಕೆಲವು ಯುಗಗಳನ್ನಾಗಿ ಗುರುತಿಸುವ ಕಾರ್ಯ ನಮ್ಮ ಸಾಹಿತ್ಯ ಚರಿತ್ರಕಾರರಿಂದ ನಡೆದುಬಂದಿದೆ. ಕನ್ನಡ ಸಾಹಿತ್ಯ ಚರಿತ್ರೆಗೆ ವಿಪುಲ ಸಾಮಗ್ರಿಯನ್ನು ಒದಗಿಸಿದ ದಿ. ಆರ್. ನರಸಿಂಹಾಚಾರ್ಯರು 'ಕರ್ನಾಟಕ ಕವಿಚರಿತೆ'ಯ ಪ್ರಥಮ ಸಂಪುಟದಲ್ಲಿ ಕನ್ನಡ ಕವಿಗಳನ್ನು ಸ್ಥೂಲವಾಗಿ ವಿಂಗಡಿಸುತ್ತ ಜೈನ, ವೀರಶೈವ ಮತ್ತು ವೈಷ್ಣವ ಎಂಬ ಮೂರು ಪಂಗಡಗಳಲ್ಲಿ ಹಂಚಿ, ಜೈನಯುಗ, ವೀರಶೈವಯುಗ, ವೈಷ್ಣವಯುಗ ಎಂಬ ವಿಭಜನೆಗೆ ಮಾರ್ಗ ಮಾಡಿಕೊಟ್ಟರು. ಆಯಾ ಕಾಲದ ಪ್ರಭಾವಶಾಲಿಯಾದ ಮತಧರ್ಮಕ್ಕನುಸರಿಸಿ ಹೀಗೆ ಕಾಲವಿಭಾಗ ಮಾಡಬೇಕೆಂಬುದು ಒಂದು ತತ್ವ. ಈ ತತ್ವ ಎಷ್ಟರಮಟ್ಟಿಗೆ ಸಮರ್ಪಕವಾದುದು? ಎಂಬುದು ಒಂದು ಚರ್ಚೆಯ ವಿಷಯ. ಅದರಿಂದಾಗಿ ಬೇರೆ ಬೇರೆ ತಾತ್ವಿಕ ನಿಲುವುಗಳೂ ಮೂಡಿಬಂದವು. ಅದು ಏನೇ ಇದ್ದರೂ ಕನ್ನಡ ಪ್ರಾಚೀನ ಸಾಹಿತ್ಯ ಧರ್ಮದ ಹಿನ್ನೆಲೆಯಿಲ್ಲದೆ ಮೂಡಿದುದಲ್ಲ. ಇಡೀ ಭಾರತೀಯ ಸಾಹಿತ್ಯ ಪರಂಪರೆಗೆ ಧರ್ಮದ ಅಸ್ತಿತ್ವವಿರುವುದನ್ನು ನಾವು ಮರೆಯುವಂತಿಲ್ಲ. ಕನ್ನಡದ ಮಟ್ಟಿಗೆ ಪ್ರಾರಂಭದಲ್ಲಿ ಜೈನಧರ್ಮ, ಮಧ್ಯದಲ್ಲಿ ವೀರಶೈವಧರ್ಮ, ಅದರೊಂದಿಗೆ ಮತ್ತು ಅದರ ನಂತರ ವೈಷ್ಣವ ಧರ್ಮ ಸಾಹಿತ್ಯದ ಮೇಲೆ ಪ್ರಭಾವ ಬೀರಿದ್ದುದು ಸ್ಪಷ್ಟವಾಗಿಯೇ ಕಂಡುಬರುತ್ತದೆ. ಭಾರತೀಯ ಸಾಹಿತ್ಯದಲ್ಲಿ ಧರ್ಮವು ಪ್ರಮುಖ ಪಾತ್ರ ವಹಿಸಿದ್ದುದು ತಾನೇ ತಾನಾಗಿ ಕಂಡುಬರುವ ವಿಷಯರಾಗಿದೆ.

ಕನ್ನಡ ಸಾಹಿತ್ಯದಲ್ಲಿ ವೀರಶೈವ ಸಾಹಿತ್ಯವು ಅತ್ಯಂತ ಪ್ರಮುಖವಾದ ಒಂದು ಭಾಗ. ವೀರಶೈವ ಸಾಹಿತ್ಯಕ್ಕೆ ನಾಂದಿ ಹಾಡಿದುದು ವಚನಸಾಹಿತ್ಯ. ಈ ವಚನಸಾಹಿತ್ಯ ಹಲವು ದೃಷ್ಟಿಗಳಿಂದ ಕನ್ನಡ ಸಾಹಿತ್ಯದಲ್ಲಿ ಅತ್ಯಂತ ಮಹತ್ವದ ಪ್ರಕಾರವಾಗಿ ಕಂಗೊಳಿಸುತ್ತದೆ. ವಿಶ್ವಸಾಹಿತ್ಯಕ್ಕೆ ಕನ್ನಡ ಸಾಹಿತ್ಯ ನೀಡಿರುವ ಅನನ್ಯ ಕೊಡುಗೆಯೆಂದರೆ ಈ ವಚನಸಾಹಿತ್ಯವೇ ಇಂಥ ಸಾಹಿತ್ಯ ಪ್ರಕಾರ ವಿಶ್ವದ ಯಾವುದೇ ಸಾಹಿತ್ಯದಲ್ಲಿ ದೊರೆಯದಿರುವುದನ್ನು ಪ್ರೊ. ಶಿ.ಶಿ. ಬಸವನಾಳರಂಥ ವಿದ್ವಾಂಸರು ಬಹಳ ದಿನಗಳ ಹಿಂದೆಯೇ ಗುರುತಿಸಿದ್ದಾರೆ. ವಚನ ಸಾಹಿತ್ಯ ಬಸವಣ್ಣನವರ ಮತ್ತು ಅವರ ಸಮಕಾಲೀನರ ಶ್ರೀಮಂತ ಕೊಡುಗೆಯಾಗಿದ್ದರೂ ಅದು ಅವರಿಗಿಂತ ತುಸು ಮುಂಚೆಯೇ ಪ್ರಾರಂಭವಾಗಿರುವುದು ತಿಳಿದುಬರುತ್ತದೆ. ಹನ್ನೊಂದನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ಡೋಹರ ಕಕ್ಕಯ್ಯ, ಮಾದಾರ ಚೆನ್ನಯ್ಯ, ಮತ್ತು ಕೆಂಭಾವಿ ಭೋಗಯ್ಯ ಇವರು ವಚನಗಳನ್ನು ರಚಿಸಿದಂತೆ ತಿಳಿದುಬರುತ್ತದೆ. ಹನ್ನೊಂದನೆಯ ಶತಮಾನದ ಮಧ್ಯದಲ್ಲಿದ್ದ ಜೇಡರ ದಾಸಿಮಯ್ಯನ ವಚನಗಳು ತುಂಬ ಪ್ರಸಿದ್ಧಿಯನ್ನು ಪಡೆದಿವೆ. ಡಾ. ಟಿ.ವಿ. ವೆಂಕಟಾಚಲ ಸಾಸ್ತ್ರಿಗಳು 'ವಚನ ಸಾಹಿತ್ಯದ ಉಗಮ ಮತ್ತು ವಿಕಾಸ'ವೆಂಬ ಲೇಖನದಲ್ಲಿ ಕೆಲವು ಪ್ರಾಚೀನ ವಚನಕಾರರ ಹೆಸರುಗಳನ್ನು ಹೇಳಿ, "ಇವರಲ್ಲಿ ಕೆಲವರು ಬಸವಣ್ಣನವರಿಗೆ ವೃದ್ಧ ಸಮಕಾಲೀನರೂ ಇನ್ನು ಕೆಲವರು ಪೂರ್ವಿಕರೂ ಆಗಿದ್ದಂತೆ ತೋರುತ್ತದೆ" ಎಂದಿದ್ದಾರೆ. ಬಸವಣ್ಣನವರ ಪೂರ್ವದಲ್ಲಿ ಕೆಲವರು ವಚನಕಾರರಿದ್ದರೆಂಬುದು ಮಾತ್ರ ಖಚಿತವಾದುದು. ವಚನಗಳ ರೂಪ ಮತ್ತು ವಸ್ತುವಿನ ದೃಷ್ಟಿಯಿಂದ ಹನ್ನೊಂದನೆಯ ಶತಮಾನದ ವಚನಕಾರರಲ್ಲಿ ಎದ್ದು ಕಾಣುವವನು ಜೇಡರ ದಾಸಿಮಯ್ಯನೇ. ಪ್ರೊ. ಶಿ.ಶಿ. ಬಸವನಾಳರು ವ್ಯಾಖ್ಯಾನಿಸಿದಂತೆ 'ವಚನ, ಗದ್ಯ, ಪದ್ಯಗಳ ನಡುವಣ ಮಾದರಿ'ಯಾಗಿದ್ದರೂ ಜೇಡರ ದಾಸಿಮಯ್ಯನ ವಚನಗಳು ಲಯಬದ್ಧವಾಗಿಯೂ ಕಾವ್ಯಮಯವಾಗಿಯೂ ಇರುವುದನ್ನು ಕಾಣಬಹುದು;

**ಇಳೆ ನಿಮ್ಮ ದಾನ ಬೆಳೆ ನಿಮ್ಮ ದಾನ**
**ಸುಳಿದು ಬೀಸುವ ಗಾಳಿ ನಿಮ್ಮ ದಾನ**
**ನಿಮ್ಮ ದಾನವನುಂಡು ಅನ್ಯರನು ಬೊಗಳುವಾ**
**ಕುನ್ನಿಗಳನೇನೆಂಬೆ ರಾಮನಾಥಾ**

ಪದ್ಯಕ್ಕೆ ಹತ್ತಿರವಾಗಿರುವ, ಅಂತರಿಕ ಪ್ರಾಸ ಹೊಂದಿರುವ ಇಂಥ ವಚನಗಳು ಕಾವ್ಯದ ಒಂದು ಪ್ರಭೇದವಾಗಿ ಕಾಣುತ್ತಿದ್ದರೆ ಅದು ಅಚ್ಚರಿಯ ಸಂಗತಿಯಲ್ಲ.

ಬಸವಣ್ಣವರಿಗಿಂತ ಮೊದಲು ಪ್ರಾರಂಭವಾದ ವಚನ ಸಾಹಿತ್ಯ ಬಸವಣ್ಣನವರ ಕಾಲದಲ್ಲಿ ಸಮೃದ್ಧವಾಗಿ ಬೆಳೆಯಿತು.

ಸೈದ್ಧಾಂತಿಕವಾಗಿ ಹೊಸ ಸಮಾಜವನ್ನು ಕಟ್ಟಲು, ಹೊಸ ಅನುಭಾವ ಪಥವನ್ನು ನಿರ್ಮಿಸಲು ಹೊರಟ ಬಸವಣ್ಣನವರು ಹೊಸ ಮನ್ವಂತರವನ್ನೇ ರೂಪಿಸಿದರು. ಏಕದೇವೋಪಾಸನೆ, ಸರ್ವ-ಸಮಾನತೆ, ಕಾಯಕ ತತ್ವ ಮುಂತಾದವುಗಳನ್ನು ಕಾರ್ಯರೂಪಕ್ಕೆ ತಂದು, ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯಸ್ಥಲಗಳ ಷಟ್‌ಸ್ಥಲ ಸೋಪಾನಗಳ ಮೂಲಕ ಆತ್ಮೋನ್ನತಿಯ ಸಾಧನವನ್ನು ಬಳಕೆಗೆ ತಂದು, ಇಡೀ ಸಮಾಜವನ್ನೇ ಪರಿವರ್ತಿಸುವ ಕಾರ್ಯ ಮಾಡಿದ ಬಸವಣ್ಣನವರ ವಚನಗಳು ಅವರ ಜೀವನಾನುಭವದ ಪ್ರತಿಬಿಂಬಗಳಾಗಿವೆ. ಸಾಮಾಜಿಕ ಮತ್ತು ಧಾರ್ಮಿಕ ಕ್ರಾಂತಿಗಳೆರಡನ್ನೂ ಸಾಧಿಸಿದ ಶ್ರೇಯಸ್ಸು ಬಸವಣ್ಣನವರಿಗೆ ಸಲ್ಲುತ್ತದೆ. ಎಂಟುನೂರು ವರುಷಗಳ ತರುವಾಯದಲ್ಲಿ ಪ್ರಗತಿಪರ ಧೋರಣೆಯುಳ್ಳ ಎಲ್ಲ ಜನಾಂಗವೂ ಸ್ವೀಕರಿಸುವಂಥ ಜೀವನ ಮೌಲ್ಯಗಳನ್ನು ನೀಡಿದ ಬಸವಣ್ಣನವರ ವಚನಗಳಲ್ಲಿ ಚಿರಂತನವಾಗಿ ಬೆಳಗುವ ನುಡಿ ಮುತ್ತುಗಳಿವೆ. 'ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ', 'ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ, ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ'. 'ಸತ್ಯ ನುಡಿವುದೇ ದೇವಲೋಕ, ಮಿಥ್ಯ ನುಡಿವುದೇ ಮರ್ತ್ಯಲೋಕ; ಆಚಾರವೇ ಸ್ವರ್ಗ ಅನಾಚರವೇ ನರಕ'. 'ದಯವಿಲ್ಲದ ಧರ್ಮವಾವುದಯ್ಯ, ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ, ದಯವೇ ಧರ್ಮದ ಮೂಲವಯ್ಯ' ಇಂಥ ಹಲವಾರು ಉಕ್ತಿಗಳು ಬಸವಣ್ಣನವರ ವಚನಗಳಲ್ಲಿ ಹೇರಳವಾಗಿ ಸಿಕ್ಕುತ್ತವೆ. ವರ್ಣರಹಿತ, ವರ್ಗರಹಿತ ಸಮಾಜವನ್ನು ಕಟ್ಟುವ ಕಾರ್ಯದಲ್ಲಿ ತೊಡಗಿದ ಬಸವಣ್ಣನವರು ಎಲ್ಲ ಬಗೆಯ ಶೋಷಣೆಯಿಂದ ಮುಕ್ತವಾದ ಸಮಾಜ ನಿರ್ಮಿತಿಯಲ್ಲಿ ಮಾಡಿದ ಸಾಧನೆ ಅನನ್ಯವಾಗಿದೆ

ಬಸವಣ್ಣನವರ ಜೊತೆಗೆ ಮಹಾಜ್ಞಾನಿಯಾದ ಚೆನ್ನಬಸವಣ್ಣ, ವೈರಾಗ್ಯನಿಧಿಯಾದ ಅಲ್ಲಮಪ್ರಭು, ಶಿವಯೋಗಿ ಸಿದ್ಧರಾಮ, ಮಧುರಭಕ್ತಿಯ ಅಕ್ಕಮಹಾದೇವಿ ಮೊದಲಾದವರು ಬರೆದ ವಚನಗಳು ಕನ್ನಡ ಸಾಹಿತ್ಯದ ಅನುಪಮ ಕೊಡುಗೆಗಳಾಗಿವೆ. ತತ್ವ, ಅನುಭಾವ ಮತ್ತು ಕಾವ್ಯಗಳ ತ್ರಿವೇಣಿಸಂಗಮವಾಗಿರುವ ಇವರ ವಚನಗಳು ಅಂದಿನ ಬದುಕನ್ನು ತಿದ್ದಿದಂತೆ ಇಂದಿನ ಬದುಕನ್ನು ತಿದ್ದಬಲ್ಲವಾಗಿವೆ. ಬೇರೆ ಬೇರೆ ಕಾಯಕದಲ್ಲಿ ನಿರತರಾದ ಮಡಿವಾಳ ಮಾಚಯ್ಯ, ಅಂಬಿಗರ ಚೌಡಯ್ಯ, ಮೋಳಿಗೆಯ ಮಾರಯ್ಯ, ಆಯ್ದಕ್ಕಿ ಮಾರಯ್ಯ, ತುರುಗಾಹಿ ರಾಮಣ್ಣ ಮುಂತಾದವರು; ಮುಕ್ತಾಯಕ್ಕ, ನೀಲಲೋಚನೆ, ಗಂಗಾಂಬಿಕೆ, ಅಕ್ಕನಾಗಮ್ಮ ಲಿಂಗಮ್ಮ ಸತ್ಯಕ್ಕ ಇತ್ಯಾದಿ ಶರಣೆಯರೂ ವಚನಗಳನ್ನು ಬರೆದು ಆ ಸಾಹಿತ್ಯ ಸಂಪತ್ತನ್ನು ಹೆಚ್ಚಿಸಿದ್ದಾರೆ. ಕನ್ನಡ ಸಾಹಿತ್ಯರು ಪಾಂಡಿತ್ಯದ ಶೃಂಖಲೆಯಿಂದ ಬಿಡಿಸಿಕೊಂಡು, ಆಸ್ಥಾನದ ಗದ್ದುಗೆಯಿಂದ ಕೆಳಗಿಳಿದು, ಶ್ರೀಸಾಮಾನ್ಯರ, ಕೆಳವರ್ಗದವರ, ಮಹಿಳೆಯರ ಬಳಿಗೆ ಬಂದು, ಆಡುಮಾತಿನ ಜೀವಂತಿಕೆಯನ್ನು ಬಳಸಿಕೊಂಡು, ಹೊಸ ರುಚಿಯನ್ನು ಕೊಟ್ಟಿತು. ಇಲ್ಲಿಂದ ಮುಂದೆ ಸಾಹಿತ್ಯದಲ್ಲಿ ಹಲವು ತಿರುವುಗಳು ಕಾಣಿಸಿಕೊಂಡರೂ ವಚನ ಸಾಹಿತ್ಯದಪ್ರಭಾವ, ಪ್ರೇರಣೆಗಳು ಜೀವಂತವಾಗಿ ಉಳಿದುಕೊಂಡಿದ್ದು, ಅವುಗಳ ಸೃಷ್ಟಿಕಾರ್ಯ ಆಗಾಗ ನಡೆಯುತ್ತಲೇ ಬಂದಿದೆ. ವಚನಸಾಹಿತ್ಯ ವೀರಶೈವ ಸಾಹಿತ್ಯದ ಬುನಾದಿಯೂ ಅಹುದು, ಭವ್ಯ ಸೌಧವೂ ಅಹುದು.

ಕಾಲಾನುಕ್ರಮದಲ್ಲಿ ನೋಡುವುದಾದರೆ ವಚನ ಸಾಹಿತ್ಯದ ನಂತರ ಹರಿಹರ ರಾಘವಾಂಕರು ವೀರಶೈವ ಕವಿಗಳಾಗಿ ಕಾಣುತ್ತಾರೆ. ಹರಿಹರ ಭಕ್ತಕವಿ, ಶಿಖಕವಿ. "ಹರಂಗೆ ಶಶಿಭೂಷಣಂಗೆ, ಶಿವಗಂಗೆ ಎಯ್ದೆ ನಾಲಗೆಯಂ ಮಾರಿದೆನೊಲ್ದು ಹಂಪೆಯ ವಿರೂಪಾಕ್ಷಂಗದೇನೆಂದಪೆಂ" ಎಂದು ಹೇಳಿಕೊಳ್ಳುವ, "ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆಯಕ್ಕಟಾ, ತನತನಗಿಂದ್ರ ಚಂದ್ರ ರವಿ ಕರ್ಣ ಧಧೀತಿ ಬಲೀಂದ್ರನೆಂದು ಮೇಣ್ ಅನವರತಂ ಪೊಗಳ್ದು ಕೆಡಬೇಡೆಲೆ ಮಾನವ, ನೀನಹರ್ನಿಶಂ ನೆನೆ ಪೊಗಳರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಾ" ಎಂದು ಸಾರುವ ಹರಿಹರನು ಶಿವನನ್ನು ಹಾಗೂ ಶಿವಶರಣರನ್ನು ಕುರಿತೇ ಕಾವ್ಯಬರೆದನು. ಅವನ 'ಪಂಪಾಶತಕ', 'ರಕ್ಷಾಶತಕ' ಆತನ ಉತ್ಕಟ ಭಕ್ತಿಯ ಭಾವಗೀತಗಳಾಗಿವೆ. ಅವನ ನೂರಾರು ರಗಳೆಗಳು ಪುರಾತನ, ನೂತನ ಶರಣರ ಚರಿತ್ರಬಿಂಬಗಳಾಗಿ ಭಾವ ನಿರ್ಭರತೆ, ಭಕ್ತಿಯ ಉತ್ಕಟತೆಗಳಿಂದ ಗಮನ ಸೆಳೆಯುತ್ತವೆ. **'ಬಸವರಾಜ ದೇವರ ರಗಳೆ'**, **'ನಂಬಿಯಣ್ಣನ ರಗಳೆ'**, **'ತಿರುನೀಲಕಂಠನ ರಗಳೆ'**, **'ಮಹಾದೇವಿಯಕ್ಕನ ರಗಳೆ'**, **'ಪ್ರಭುದೇವರ ರಗಳೆ'** ಮುಂತಾದವುಗಳಲ್ಲಿ ಚರಿತ್ರೆಯನ್ನು, ಕಥನ ಗುಣವನ್ನು, ಪರಾಡಗಳ ಲೇಪನವನ್ನು, ಶಿವನ ಲೀಲೆಯನ್ನು ಒಟ್ಟಾಗಿ ಕಾಣಬಹುದಾಗಿದೆ.

ಹರಿಹರನ ಶಿಷ್ಯನಾದ ರಾಘವಾಂಕನು ತನ್ನ ಕಾವ್ಯಕ್ಕೆ ಷಟ್ಪದಿಯನ್ನು ಮಾಧ್ಯಮವಾಗಿರಿಸಿಕೊಂಡು **'ಸೋಮನಾಥ ಚರಿತ್ರೆ'**, **'ವೀರೇಶ ಚರಿತೆ'**, **'ಸಿದ್ಧರಾಮ ಚಾರಿತ್ರ್ಯ'** ಈ ಮಹತ್ವದ ಕಾವ್ಯಗಳನ್ನು ಸೃಷ್ಟಿಸಿದುದಲ್ಲದೆ ಕನ್ನಡ ಸಾಹಿತ್ಯದಲ್ಲಿ ಅನನ್ಯವೆನಿಸುವ **'ಹರಿಶ್ಚಂದ್ರ ಕಾವ್ಯ'**ವನ್ನು ಬರೆದಿರುವನು. **'ಸೋಮನಾಥ ಚರಿತ್ರೆ'**ಯಲ್ಲಿ ಆದಯ್ಯನ ಕಥೆಯಿದ್ದರೆ, **'ವೀರೇಶ ಚರಿತೆ'**ಯಲ್ಲಿ





ದಕ್ಷನ ಯಜ್ಞದ ಸಂದರ್ಭದಲ್ಲಿ ಶಿವನ ಕೋಪದಿಂದ ಜನಿಸಿದ ವೀರಭದ್ರನ ವೃತ್ತಾಂತವಿದೆ **'ಸಿದ್ಧರಾಮನ ಚಾರಿತ್ರ್ಯ'** ಸೊನ್ನಲಿಗೆಯ ಸಿದ್ಧರಾಮನನ್ನು ವಸ್ತುವಾಗಿರಿಸಿಕೊಂಡಿದೆ. **'ಹರನೆಂಬುದೇ ಸತ್ಯ, ಸತ್ಯವೆಂಬುದೇ ಹರನು'** ಎಂಬ ತತ್ವವನ್ನು ಬಿತ್ತರಿಸಲು ಹರಿಶ್ಚಂದ್ರ ಕಾವ್ಯ ಸೃಷ್ಟಿಗೊಂಡಿದೆ.

**'ದೀಕ್ಷಾಬೋಧೆ'** ಬರೆದ ಕೆರೆಯ ಪದ್ಮರಸನನ್ನು ಇಲ್ಲಿ ನೆನೆಯಬಹುದು. ಇದು ರಗಳೆಯ ರೂಪದಲ್ಲಿಯ ತಾತ್ವಿಕ ಗ್ರಂಥ, ವೀರಶೈವ ದೀಕ್ಷೆ ಇದರ ವಸ್ತುವಾಗಿದ್ದು, ಗುರು-ಶಿಷ್ಯರ ಸಂವಾದ ರೂಪದಲ್ಲಿ ಕಾವ್ಯರೂಪಿತವಾಗಿದೆ. ಇದೊಂದು ಅನುಭಾವ ಕಾವ್ಯವೆಂದೂ ಹೇಳಬಹುದು.

ಹದಿಮೂರನೆಯ ಶತಮಾನದ ಪಾಲ್ಕುರಿಕೆಯ ಸೋಮನಾಥನನ್ನು ಮರೆಯುವಂತಿಲ್ಲ. ಈತನ ಸಾಧನೆ ತೆಲುಗು ತ್ತು ಕನ್ನಡ ಭಾಷೆಗಳೆರಡರಲ್ಲಿಯೂ ಇದೆ. ಈತನ 'ಬಸವ ಪುರಾಣಮು' ತೆಲುಗಿನಲ್ಲಿದ್ದು, ಭೀಮಕವಿಯು ಇದನ್ನೇ ಕನ್ನಡಿಸಿರುವನು. ಕನ್ನಡದಲ್ಲಿ ರಗಳೆ, ವಚನ, ಶೀಲಸಂಪಾದನೆಗಳನ್ನು ಬರೆದ ಪಾಲ್ಕುರಿಕೆಯ ಸೋಮನಾಥನು 'ತತ್ವವಿದ್ಯಾಕಲಾಪ' ಎಂಬ ಬಿರುದನ್ನು ಪಡೆದು, ಮತ ತತ್ವಗಳ ಪ್ರತಿಪಾದನೆಗೆ ಮಹತ್ವಕೊಟ್ಟ ಒಬ್ಬ ಗಮನಾರ್ಹ ಕವಿ ಹಾಗೂ ಚಿಂತಕ.

ಭೀಮಕವಿಯ **'ಬಸವ ಪುರಾಣ'** ತೆಲುಗಿನ ಅನುವಾದವಾದರೂ ಕನ್ನಡ ಷಟ್ಪದಿ ಕಾವ್ಯಗಳಲ್ಲಿ ಒಂದು ಮೈಲುಗಲ್ಲಾಗಿದೆ. ಇಲ್ಲಿಯ ಚಾರಿತ್ರಿಕ ಸಾಮಗ್ರಿ, ಕಥನ ಮಾಲಿಕೆ, ತತ್ವನಿರೂಪಣೆ ಇವು ಮಹತ್ವದ ಸಂಗತಿಗಳಾಗಿವೆ. ಹರಿಹರನ **'ಬಸವರಾಜ ದೇವರ ರಗಳೆ'**ಯ ನಂತರ ಬಸವ ಚರಿತ್ರೆಯನ್ನು ವಿವರರಾಗಿ ಚಿತ್ರಿಸಿದ ಶ್ರೇಯಸ್ಸು ಭೀಮಕವಿಗೆ ಸಲ್ಲುತ್ತದೆ. ಇಲ್ಲಿ ಬಸವಣ್ಣನ ಜೊತೆಗೆ ಆತನ ಸಮಕಾಲೀನ ಶರಣರ ಕಥೆಗಳೂ ಇದ್ದು, ಬಸವ ಪರಂಪರೆಯ ಶಿವಭಕ್ತಿ ಈ ಪುರಾಣದ ತುಂಬ ವ್ಯಾಪಿಸಿದೆ. ವೀರಶೈವ ಪುರಾಣಗಳಲ್ಲಿ ಇದಕ್ಕೆ ಮಿಗಿಲಾದ ಸ್ಥಾನವೂ ಇದೆ. ಸಿಂಗರಾಜನೆಂಬ ಇನ್ನೊಬ್ಬ ಕವಿಯೂ ಬಸವಣ್ಣನವರನ್ನು ವಸ್ತುವಾಗಿರಿಸಿ ಕಾವ್ಯ ರಚಿಸಿದ್ದುಂಟು. ಅಲ್ಪ ವ್ಯತ್ಯಾಸವನ್ನು ಪಡೆದಿರುವ ಈ ಕೃತಿಯೂ **'ಅಮಲ ಬಸವ ಚಾರಿತ್ರ್ಯ'**ವೆನಿಸಿದೆ.

ಹದಿನೈದನೆಯ ಶತಮಾನದ ವೀರಶೈವ ಸಾಹಿತ್ಯದ ಇನ್ನೊಂದು ಸುಗ್ಗಿಯ ಕಾಲ. ಲಕ್ಕಣ ದಂಡೇಶ, ಮಗ್ಗೆಯ ಮಾಯಿದೇವ, ಚಾಮರಸ, ಗುರುಬಸವ ಇವರೆಲ್ಲರಿಂದ ಜಕ್ಕಣಾರ್ಯ, ತೋಂಟದ ಸಿದ್ಧೇಶ್ವರ, ಗುಬ್ಬಿಯ ಮಲ್ಲಣಾರ್ಯ, ಸ್ವತಂತ್ರ ಸಿದ್ಧಲಿಂಗೇಶ್ವರ ಈ ಮುಂತಾದವರಿಂದ ಷಟ್ಪದಿ, ರಗಳೆ, ವಚನ ಇವೆಲ್ಲ ಹೊಸ ತೇಜಸ್ಸನ್ನು ಪಡೆದು ಪ್ರಕಟಗೊಳ್ಳುತ್ತವೆ. ಲಕ್ಕಣ ದಂಡೇಶನ **'ಶಿವತತ್ವ ಚಿಂತಾಮಣಿ'** ಒಂದು ಬೃಹತ್ ಗ್ರಂಥ. ನಿತ್ಯಾನಿತ್ಯ ವಸ್ತುವಿಸ್ತರಣ, ಸಕಲ ನಿಷ್ಕಲ ವಿಚಾರ, ಪಂಚವಿಂಶತಿ ಲೀಲೆಗಳು ಈ ಮುಂತಾದವುಗಳನ್ನಲ್ಲದೆ, ಲಿಂಗಧಾರಣ, ಶಿವಪೂಜಾ ವಿಧಿ, ಪಾದೋದಕ ಪ್ರಸಾದ ಮಹಿಮೆ, ಷಟ್ಸ್ಥಲ ಮುಂತಾದ ತಾತ್ವಿಕ ವಿಚಾರಗಳನ್ನು 'ಶಿವತತ್ವ ಚಿಂತಾಮಣಿ' ವಿವರಿಸುತ್ತಿದ್ದು, ವೀರಶೈವ ವಿಶ್ವಕೋಶದ ಮಾದರಿಯನ್ನು ಹೋಲುತ್ತದೆ. ಶಿವತತ್ವಕ್ಕೆ ಸಂಬಂಧಿಸಿದ ಎಲ್ಲ ವಿಚಾರಗಳನ್ನು ನಿರೂಪಿಸುವ ಈ ಗ್ರಂಥ 'ಚಿಂತಾಮಣಿ' ಎನಿಸಿರುವುದು ಸ್ವಾಭಾವಿಕವಾಗಿದೆ. ಗುಬ್ಬಿಯ ಮಲ್ಲಣಾರ್ಯನ **'ವೀರಶೈವ ಪುರಾಣ'** ಕೂಡ ಒಂದು ಪ್ರಮಾಣ ಗ್ರಂಥವಾಗಿ ರೂಪುಗೊಂಡಿದೆ.

ಚಾಮರಸನ **'ಪ್ರಭುಲಿಂಗ ಲೀಲೆ'** ಅಲ್ಲಮಪ್ರಭು ಸಂಪ್ರದಾಯದ ಸಲ್ಲಲಿತ ಸನ್ಮಾರ್ಗವನ್ನು ಎಲ್ಲರರಿವಂದದಲಿ ತಿಳಿಸುವ ಮಹತ್ವದ ಕಾವ್ಯ. ಗುರುಗುಹೇಶ್ವರನೇ ಒಳಗಿದ್ದು ನುಡಿದ, ದೇಗುಲವೇ ಮಾತಾಡಿದಂತೆ. ಆ ನುಡಿಯನ್ನೇ ಮಾರ್ನುಡಿದ ದಿವ್ಯಕೃತಿಯೂ ಇದು ಅಹುದು. ಇದು ಸತ್ತವರ ಕಥೆಯಲ್ಲ. ಕರ್ಮದ ಕತ್ತಲೆಗೆ ಸಿಲುಕಿರುವವರ ಸೀಮೆಯ ಹೊಲಬು ತಾನಲ್ಲ, ಹೊತ್ತು ಹೋಗದೆ ಪುಂಡರಾಲಿಪ ಮತ್ತಮತಿಗಳ ಗೋಷ್ಠಿಯಲಲ್. ಇದು ಸತ್ಯಶರಣರು ತಿಳಿಯಬೇಕಾದ ಪ್ರಭುಲಿಂಗ ಲೀಲೆ, ಅಲ್ಲಮಪ್ರಭುವಿನ ಮಹಿಮಾಪೂರ್ಣ ವ್ಯಕ್ತಿತ್ವವನ್ನು ಚಿತ್ರಿಸುತ್ತಿರುವಂತೆ, ಶರಣ ಜೀವನದ ವೈಶಿಷ್ಟ್ಯವನ್ನು ಬಿತ್ತರಿಸುತ್ತದೆ.

ಹದಿನೈದನೆಯ ಶತಮಾನದಲ್ಲಿ ವಚನ ಸಾಹಿತ್ಯದ ಸಂಕಲನ ಮತ್ತು ವ್ಯಾಖ್ಯಾನ ಮಾಡುವ ಕಾರ್ಯ ನಡೆದಿದ್ದು, ಕೆಲವರು ಸ್ವತಂತ್ರ ವಚನಗಳನ್ನೂ ಬರೆದಿರುವರು. ಮಹಾಲಿಂಗದೇವ, ಜಕ್ಕಣಾರ್ಯ, ಗುಬ್ಬಿ ಮಲ್ಲಣ್ಣ, ಕಲ್ಲುಮಠದ ಪ್ರಭುದೇವ ಮುಂತಾದವರ ವಚನ ಸಂಕಲನಗಳು ಹಲವು ದೃಷ್ಟಿಗಳಿಂದ ಪ್ರಸಿದ್ಧವಾಗಿವೆ. ಈ ಕಾಲದಲ್ಲಿ ಮೈಪಡೆದುದೊಂಡ **'ಶೂನ್ಯ ಸಂಪಾದನೆಗಳು'** ವಚನ ಸಾಹಿತ್ಯದ ಅನರ್ಘ್ಯ ರತ್ನಗಳು. ಶಿವಗಣ ಪ್ರಸಾದಿ ಮಹಾದೇವಯ್ಯ, ಹಲಗೆ ದೇವರು, ಗುಮ್ಮಳಾಪುರದ ಸಿದ್ಧಲಿಂಗ ಯತಿಗಳು, ಗೂಳೂರ ಸಿದ್ಧವೀರಣ್ಣೊಡೆಯ ಈ ನಾಲ್ವರು ಸಂಪಾದಿಸಿದ 'ಶೂನ್ಯ ಸಂಪಾದನೆಗಳು' ವೀರಶೈವ ತತ್ವ, ಸಿದ್ಧಾಂತ, ಚರಿತ್ರೆ,

ಅನುಭಾವಗಳನ್ನು ನಿರೂಪಿಸುವಲ್ಲಿ ಮಹತ್ವದ ಪಾತ್ರ ವಹಿಸುತ್ತವೆ. ಇಲ್ಲಿಯ ಸಂವಾದಗಳೂ ಸ್ವಾರಸ್ಯಪೂರ್ಣವಾಗಿದ್ದು, ಓದುಗರ ಮೇಲೆ ಗಾಢ ಪರಿಣಾಮವನ್ನು ಬೀರುತ್ತವೆ. ಈ ಶತಮಾನದಲ್ಲಿ ಮತ್ತೆ ವಚನ ರಚನೆಯ ಕಾರ್ಯ ನಡೆದಿದ್ದುದೂ ಗಮನಾರ್ಹವಾಗಿದೆ. ತೋಂಟದ ಸಿದ್ಧಲಿಂಗಯತಿಗಳು, ಸ್ವತಂತ್ರ ಸಿದ್ಧಲಿಂಗೇಶ್ವರು. ಘನಲಿಂಗದೇವರು, ಷಣ್ಮುಖಸ್ವಾಮಿಗಳು ಇವರೆಲ್ಲ ಈ ಕಾಲದ ಮಹತ್ವದ ವಚನಕಾರರು. ಬಸವಣ್ಣನವರ ಕಾಲದ ವ್ಯಾಪ್ತಿ. ವೈವಿಧ್ಯಗಳೂ ಈ ಕಾಲಕ್ಕಿಲ್ಲವೆಂಬುದು ನಿಜ. ಅಷ್ಟಲ್ಲದೆ ವಚನಕಾರರಲ್ಲಿ ಮಹಿಳೆಯರು, ಕೆಳವರ್ಗದವರು ಇಲ್ಲದಿರುವುದು ಒಂದು ಎದ್ದು ಕಾಣುವ ಕೊರತೆಯಾಗಿದೆ.

ಹದಿನೈದನೆಯ ಶತಮಾನದಲ್ಲಿ ಪುನರುಜ್ಜೀವನಗೊಂಡ ವಚನಸಾಹಿತ್ಯವು ಬಸರಾದಿಗಳ ಮಾದರಿಯನ್ನೇ ಅನುಸರಿಸಿದರೆ, ಈ ಇಪ್ಪತ್ತನೆಯ ಶತಮಾನದಲ್ಲಿ ಸೃಷ್ಟಿಯಾದ ವಚನಸಾಹಿತ್ಯವು ಆಧುನಿಕ ಸಾಹಿತ್ಯದ ಒಂದು ಅಂಗರಾಗಿಯೇ ಕಾರ್ಯ ಮಾಡುತ್ತಿದೆ. ರೂಪ ವಚನದ್ದಾದರೂ ವಸ್ತು, ಭಾವ, ದೃಷ್ಟಿಕೋನಗಳು ಆದುನಿಕವಾಗಿರುವುದು ಈ ಕಾಲದ ವೈಶಿಷ್ಟ್ಯ, ವೀರಶೈವೇತರರಾದ ಕನ್ನಡದ ಧೀಮಂತ ಸಾಹಿತಿಗಳಾದ ಪ್ರೊ. ಎಸ್.ವಿ.ರಂಗಣ್ಣ, ಪ್ರೊ. ಎಸ್.ವಿ. ಪರಮೇಶ್ವರ ಭಟ್ಟರ ವಚನಗಳು ಹೊಸಗನ್ನಡ ಸಾಹಿತ್ಯದ ಮಹತ್ವದ ಕೊಡುಗೆಗಳಾಗಿದೆ.

ವೀರಶೈವ ಕವಿಗಳಾದ ಡಾ. ಸಿದ್ಧಯ್ಯ ಪುರಾಣಿಕ, ಡಾ. ಜ.ಚ.ನಿ., ಮಹಾದೇವ ಬಣಕಾರ, ಸಂಗಮೇಶ ಹೊಸಮನಿ ಮೊದಲಾದವರು ಬರೆದ ವಚನಗಳು ನಿಜಕ್ಕೂ ಅಭ್ಯಸನೀಯವಾಗಿವೆ. ಇಂದಿನ ಒಮಕಿನ ವಿಸ್ತಾರವಾದ ಅನುಭವವನ್ನು ಹೊಂದಿರುವ ಇವರ ವಚನಗಳು ನವೋದಯ, ನವ್ಯ ಕಾವ್ಯ ಪರಂಪರೆಯಂತೆ ಹೊಸ ಅನುಭವವನ್ನು ನೀಡುತ್ತವೆ. ಬದುಕನ್ನು ಸಾರ್ಥಕವಾಗಿ ವಿಶ್ಲೇಷಿಸುತ್ತವೆ ಮತ್ತು ವಿಮರ್ಶಿಸುತ್ತವೆ. ಪಿ.ಎಸ್. ಪಾಟೀಲ ಮತ್ತು ಕುಮಾರ ಕಕ್ಕಯ್ಯ ಇವರ ವಚನಗಳಲ್ಲಿ ಸಮತಾವಾದದ ಮತ್ತು ಪ್ರಗತಿಶೀಲದ ಸಂವೇದನೆ ಎದ್ದು ಕಾಣುತ್ತದೆ. ಮಾತೆ ಮಹಾದೇವಿಯವರನ್ನೊಳಗೊಂಡು ಅನೇಕ ಮಹಿಳೆಯರೂ ವಚನ ರಚಿಸಿದ್ದುದನ್ನೂ ಗಮನಿಸಬಹುದು.

ವಚನ ಸಾಹಿತ್ಯದ ಜೊತೆಗೆ ಸ್ವರವಚನ ಸಾಹಿತ್ಯವೂ ಸೃಷ್ಟಿಗೊಂಡು ಭಾವಗೀತಗಳ ಸತ್ವ ಹಾಗೂ ಲಯ ಮಾಧುರ್ಯದಿಂದ ಅವು ತುಂಬ ಪ್ರಸಿದ್ಧಿಯನ್ನು ಪಡೆದಿವೆ. ಅಕ್ಕ ಮಹಾದೇವಿಯ "ನಂಬಿದ ಗುರುವೆ ನಂಬಿದೆ, ನಂಬಿದೆ ಸ್ವಾಮಿ ನಂಬಿದೆ, ಅಂಬಿಕಾರಮಣ ನೀನಂಬಿಗ" ಎಂಬಂತಹ ಸ್ವರ ವಚನಗಳ ದೀಪ್ತಿ ನಿತ್ಯನೂತನವಾದುದು. ನಿಜಗುಣ ಶಿವಯೋಗಿಗಳ 'ಕೋಗಿಲೆ ಚೆಲ್ವ ಕೋಗಿಲೆ', 'ಜ್ಯೋತಿ ಬೆಳಗುತಿದೆ' ಮುಂತಾದ ಸ್ವರವಚನಗಳು ಕೈವಲ್ಯ ಪರಂಪರೆಯನ್ನೇ ನಿರ್ಮಿಸಿವೆ. ಮುಪ್ಪಿನ ಷಡಕ್ಷರಿ, ಸರ್ಪಭೂಷಣ ಶಿವಯೋಗಿ, ಬಾಲಲೀಲಾ ಮಹಾಂತ ಶಿವಯೋಗಿ ಹೀಗೆ ಹಲವಾರು ಅನುಭಾವಿಗಳು ಹಾಡಿದ ಹಾಡುಗಳು ಉನ್ನತ ಮಟ್ಟದ ಅನುಭಾವ ಜ್ಞಾನವನ್ನು ನೀಡುತ್ತಿವೆ. ಸರ್ವಜ್ಞನ ತ್ರಿಪದಿಗಳಲ್ಲಿಯೂ ವೀರಶೈವ ತತ್ವಜ್ಞಾನವಿರುವುದನ್ನು ಕಾಣಬಹುದು.

ಹದಿನೇಳನೆಯ ಶತಮಾನದ ಚಂಪೂ ಕವಿ ಷಡಕ್ಷರದೇವನು ಹರಿಹರನ ಉದಿತ ಮಾರ್ಗದಲ್ಲಿಯೇ ಕಾವ್ಯ ಬರೆದವನು. ಕವಿತ್ವ, ಪಾಂಡಿತ್ಯಗಳ ಅಚ್ಚರಿಯ ಬೆರಕೆಯಿರುವ ಈ ಕವಿ ವಿರಕ್ತನೂ ಅಹುದು. **'ರಾಜಶೇಖರ ವಿಳಾಸ'**, **'ಶಬರಶಂಕರ ವಿಳಾಸ'** ಮತ್ತು **'ಬಸವರಾಜ ವಿಜಯ'** ಈ ಕೃತಿಗಳ ಮೂಲಕ ಶಿವಭಕ್ತಿ, ಶಿವಲೀಲೆ, ಬಸವ ಚರಿತ್ರೆಗಳನ್ನು ಅರ್ಥಪೂರ್ಣವಾಗಿ ನಿರೂಪಿಸಿರುವನು.

ಆಧುನಿಕ ಸಾಹಿತ್ಯದಲ್ಲಿ ಮಧುರಚೆನ್ನ, ಈಶ್ವರ ಸಣಕಲ್ಲ, ಡಿ.ಎಸ್. ಕರ್ಕಿ, ಚೆನ್ನವೀರ ಕಣವಿ, ಡಾ. ಜಿ.ಎಸ್. ಶಿವರುದ್ರಪ್ಪ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ, ಪ್ರೊ. ಚಂದ್ರಶೇಖರ ಪಾಟೀಲ, ಪಿ. ಲಂಕೇಶ ಹೀಗೆ ಅನೇಕರು ಹುಟ್ಟಿನಿಂದ ವೀರಶೈವರಾಗಿದ್ದರೂ ಆಧುನಿಕ ಕನ್ನಡ ಕಾವ್ಯವಾಹಿನಿಯಲ್ಲಿ ಜಾತ್ಯಾತೀತವಾದ ಕಾವ್ಯ ಸೃಟಿಸಿರುವುದು ಗಮನಾರ್ಹವಾಗಿದೆ. ಕತೆ, ಕಾದಂಬರಿ, ನಾಟಕ, ವಿಮರ್ಶೆ, ಸಂಶೋಧನೆ ಮುಂತಾದ ಕ್ಷೇತ್ರಗಳಲ್ಲಿ ವೀರಶೈವ ಜನಾಂಗದಿಂದ ಬಂದ ಹಲವರ ಸಾಧನೆ ಕಣ್ಣು ಕುಕ್ಕಿಸುವಂತಿದೆ.

ಪ್ರಾಚೀನ ವೀರಶೈವ ಸಾಹಿತ್ಯವನ್ನು ಗಮನಿಸಿದರೆ, ಆ ಸಾಹಿತ್ಯ ಷಟ್‌ಸ್ಥಲ, ಪಂಚಾಚಾರ, ಅಷ್ಟಾವರಣಗಳ ತತ್ವವನ್ನು ಅನುಸರಿಸಿಯೂ ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ಘನೋದ್ದೇಶವನ್ನು ಹೊಂದಿದ್ದರಿಂದ ಧರ್ಮದ ಪರಿಮಿತಿಯನ್ನು ಮೀರಿ ನಿಲ್ಲುತ್ತವೆ. ಸಾರ್ವತ್ರಿಕ ಹಾಗೂ ಸಾರ್ವಕಾಲಿಕವಾದ ಜೀವನ ಮೌಲ್ಯಗಳಿಂದ ಅವು ಯಾವಾಗಲೂ ಮಾನವ ಜನಾಂಗದ ಕಲ್ಯಾಣವನ್ನು ಬಯಸುತ್ತವೆ. ಈ ದೃಷ್ಟಿಯಿಂದ ಅವು ಮತ್ತೆ ಮತ್ತೆ ಅವಲೋಕನೀಯವಾಗುತ್ತವೆ. ಬಾಳಿಗೆ ಬೆಳಕನ್ನೂ ನೀಡುತ್ತವೆ.





ಭಾಗ-೪

# ಮಠದಿಂದ ಮಧುರೆಗೆ

*(ಕಳೆದ ಸಂಚಿಕೆಯಿಂದ)*

- ಪ್ರೊ. ಹೆಚ್. ವಿ. ವೀರಭದ್ರಯ್ಯ

ರಾತ್ರಿ ಮಲಗುವುದು ಎಷ್ಟು ಹೊತ್ತಾದರೂ ಏಳುವುದು ಮಾತ್ರ ಕರಾರುವಾಕ್ಕಾಗಿ 2.15 ಘಂಟೆಗೆ. ಇದು ಪೂಜ್ಯ ಶ್ರೀಶ್ರೀಗಳವರ ಸಮಯಗೌರವ. ಶ್ರೀಮಠದಲ್ಲಿರಲಿ, ಪ್ರವಾಸದಲ್ಲಿರಲಿ ಸುಮಾರು ಆರು ದಶಕಗಳಿಗೂ ಹೆಚ್ಚು ಕಾಲದಿಂದ ಶ್ರೀಗಳು ಅನುಸರಿಸಿಕೊಂಡು ಬಂದಿರುವ ನಿಯಮನಿಷ್ಠೆ. ಸ್ನಾನ. ಧ್ಯಾನ. ಪೂಜೆ, ಅನುಷ್ಠಾನ, ಲಿಂಗಾನುಸಂಧಾನಗಳಿಗೆ ಅದು ಪ್ರಶಸ್ತವಾದ ಹಾಗೂ ಪ್ರಶಾಂತವಾದ ವೇಳೆ ಎಂಬುದು ಶ್ರೀಗಳವರ ನಂಬಿಕೆ. ದಿನಾಂಕ 19.1.2000ದಂದು ಶ್ರೀ ವಿಶ್ವನಾಥ್ ಅವರ ಮನೆಯಲ್ಲಿ ಮುಂಜಾನೆಯಲ್ಲಿ ಲಿಂಗಪೂಜೆ ಮುಗಿಸಿ, ಪ್ರಸಾದ ಸಲ್ಲಿಸಿದ ನಂತರ ಶ್ರೀಕ್ಷೇತ್ರ ರಾಮೇಶ್ವರಕ್ಕೆ ಪ್ರಯಾಣ ಸಾಗಿತು.

ಪ್ರವಾಸದ ತಂಡದಲ್ಲಿ ಪೂಜ್ಯ ಶ್ರೀಗಳು, ಕನಕಪುರ ದೇಗುಲಮಠದ ಪೂಜ್ಯ ಶ್ರೀ ಮುಮ್ಮಡಿ ನಿರ್ವಾಣಸ್ವಾಮಿಗಳು, ಶ್ರೀ ವಿಶ್ವನಾಥ್ ಅವರ ಕುಟುಂಬದ ಸದಸ್ಯರು, ಶ್ರೀ ಕೆ.ಸಿ. ಶಿವಗಂಗಯ್ಯ, ಶ್ರೀ ಕೆ.ಹೆಚ್. ಪರಮಶಿವಯ್ಯ ಶ್ರೀ ಬಿ. ಗಂಗಾಧರಯ್ಯ, ಶ್ರೀ ಎಂ. ಮಲ್ಲವೀರಯ್ಯ, ಯಾಳೀಹಳ್ಳಿ ಶ್ರೀ ಮಹದೇವಯ್ಯ, ಶ್ರೀಗಳವರ ಸೇವಾಸಿಬ್ಬಂದಿ, ವಾಹನ ಚಾಲಕರು ಪ್ರತ್ಯೇಕ ವಾಹನಗಳಲ್ಲಿ ಪ್ರಯಾಣ ಬೆಳೆಸಿದೆವು.

ಶ್ರೀ ರಾಮೇಶ್ವರ ಕ್ಷೇತ್ರ ವಿಷ್ಣು ಹಾಗೂ ಈಶ್ವರ ಕ್ಷೇತ್ರವಾಗಿರುವುದರಿಂದ ಮಹತ್ವ ಪಡೆದಿದೆ. ಕಾಶಿಯಿಂದ ರಾಮೇಶ್ವರ ಯಾತ್ರೆ ಪವಿತ್ರವೆಂದು ಹಿಂದೂಗಳ ನಂಬಿಕೆ. ಮಧುರೆಯಿಂದ 173 ಕಿ.ಮೀ. ದೂರವಿರುವ ಈ ಪುಣ್ಯಸ್ಥಳದ ವಿಸ್ತೀರ್ಣ 34 ಚ. ಮೈಲಿಗಳು. ಅಂದರೆ 61.8 ಕಿ.ಮೀ. ಸಮುದ್ರಮಟ್ಟಕ್ಕಿಂತ +2.74 ಮೀ. ಎತ್ತರವಾಗಿದೆ. ರೈಲು, ಬಸ್ಸು ಮತ್ತು ವಿಮಾನ ಸಾರಿಗೆ ಸೌಲಭ್ಯ ಪಡೆದಿದೆ. ಆಸ್ಪತ್ರೆ, ಅಂಚೆ ಕಚೇರಿ. ಬ್ಯಾಂಕ್ ಸೌಲಭ್ಯಗಳಿವೆ. ಭಾರತದ ಪವಿತ್ರ ಭೂಮಿಯನ್ನು ಪಾಂಬನ್ ಸೇತುವೆ ಹಾಗೂ ರೈಲು ಮಾರ್ಗಗಳ ಮೂಲಕ ಸಂಬಂಧ ಹೊಂದಿರುವ ರಾಮೇಶ್ವರ ಒಂದು ಸುಂದರ ದ್ವೀಪ. ಇಲ್ಲಿ ಜ್ಯೋತಿರ್ಲಿಂಗಗಳಲ್ಲಿ ಒಂದಾದ ರಾಮೇಶ್ವರ ಲಿಂಗವಿದ್ದು ರಾಮಾಯಣ ಕಾಲದಷ್ಟು ಪ್ರಾಚೀನವೆನಿಸಿದೆ. ಭಗವದಾರಾಧನೆಗೆ ಮೂರ್ತಿ, ಸ್ಥಳ, ತೀರ್ಥವೆಂಬ ಮೂರು ಲಕ್ಷಣಗಳಲ್ಲಿ ಸಂಗಮಿಸಿವೆ. ರಾಮೇಶ್ವರ ಮೂರ್ತಿ, ರಾಮೇಶ್ವರ ಕ್ಷೇತ್ರ, 43 ತೀರ್ಥಗಳಿವೆಯಾಗಿ ಪೂಜಾರ್ಹ ಪವಿತ್ರ ಭೂಮಿಯೆನಿಸಿದೆ. ದೇವಾಲಯದ ಒಳಾಂಗಣದಲ್ಲಿ ಶ್ರೀ ವಿಘ್ನೇಶ್ವರ, ಶ್ರೀ ರಾಮನಾಥಸ್ವಾಮಿ, ಶ್ರೀ ಪರ್ವತವರ್ಧಿನಿ, ಶ್ರೀ ವಿಶ್ವನಾಥ, ಶ್ರೀ ವಿಶಾಲಾಕ್ಷಿ ಶ್ರೀ ಸೇತುಮಾಧವ, ಶ್ರೀ ಜ್ಯೋತಿರ್ಲಿಂಗ, ಶ್ರೀ ಸಹಸ್ರಲಿಂಗ, ಶ್ರೀ ವಜ್ರೇಶ್ವರ, ಶ್ರೀ ನಟರಾಜ, ಶ್ರೀ ಪಲ್ಲಿಕುಂಡ ಪೆರುಮಾಳ್, ಶ್ರೀ ಆಂಜನೇಯ, ಶ್ರೀ ನಾಯನಮಾರ್ಲು ಶ್ರೀ ಶಿವದುರ್ಗೆ, ಶ್ರೀ ಮಹಾಲಕ್ಷ್ಮೀ, ಶ್ರೀ ಶಿವಪ್ರಕಾಶ, ಶ್ರೀ ರಾಮಲಿಂಗಪ್ರತಿಷ್ಠೆ, ಶ್ರೀ ತೀರ್ಥಗಳು, ಶ್ರೀವಾಹನಗಳು ನೋಡಬೇಕಾದ ಸ್ಥಳಗಳೆನಿಸಿದರೆ, ದೇವಾಲಯದ ಹೊರಾಂಗಣದಲ್ಲಿ ಅಗ್ನಿತೀರ್ಥ, ಲಕ್ಷ್ಮಣತೀರ್ಥ, ರಾಮತೀರ್ಥ, ಗಂಧಮಾದನಗಿರಿ, ಶ್ರೀ ಕೋದಂಡರಾಮ ದೇವಾಲಯ, ಪಾಂಬನ್ ಸೇತುವೆಗಳು ಪ್ರೇಕ್ಷಣೀಯವಾಗಿವೆ.

ಶ್ರೀರಾಮನು ಇಲ್ಲಿನ ಈಶ್ವರನನ್ನು ಪ್ರತಿಷ್ಠಾಪಿಸಿರುವುದರಿಂದ ಈ ಕ್ಷೇತ್ರ ರಾಮೇಶ್ವರವೆಂದು ಹೆಸರಾಗಿದೆ. ರಾಮೇಶ್ವರ, ರಾಮಲಿಂಗ, ರಾಮನಾಥನೆಂದು ಇಲ್ಲಿಯ ಲಿಂಗ ಪ್ರಸಿದ್ಧವಾಗಿದೆ. ರಾಮಲಿಂಗದ ಪಕ್ಕದಲ್ಲಿರುವ ಶ್ರೀ ವಿಶಾಲಾಕ್ಷಿ ಅಮ್ಮನವರನ್ನು ವಿಭೀಷಣ ಸ್ಥಾಪಿಸಿದನೆಂದು ಪ್ರತೀತಿ. ಲಂಕಾಧಿಪತಿಯಾದ ರಾವಣನು ಸೀತೆಯನ್ನು ಲಂಕೆಯಲ್ಲಿ ಬಂಧಿಸಿದ್ದರಿಂದ ಆಕೆಯನ್ನು ರಕ್ಷಿಸಲು ಶ್ರೀರಾಮನು ರಾಮೇಶ್ವರದಿಂದ ಲಂಕೆಗೆ ಹೊರಟನೆಂದು ರಾಮಾಯಣ ಇತಿಹಾಸವು ಹೇಳುತ್ತದೆ. ರಾಮನು ಸಮುದ್ರದೇವನನ್ನು ಹನುಮಂತನಿಗೆ ದಾರಿಯನ್ನು ಕೊಡು ಎಂದು ಕೋರಿದನು. ಆಂಜನೇಯನು ವಾನರ ಸೈನ್ಯದ ಸಹಾಯದಿಂದ ದೊಡ್ಡ ದೊಡ್ಡ ಬಂಡೆಗಳಿಂದ ಸೇತುವೆ ಕಟ್ಟಿಸಿ ಲಂಕೆಗೆ ಮಾರ್ಗವನ್ನು ಏರ್ಪಡಿಸಿದನು. ರಾವಣನ ಬಂಧನದಿಂದ ರಾಮನು ಸೀತೆಯನ್ನು ಬಿಡಿಸಿ, ರಾಮನು ರಾಮೇಶ್ವರಕ್ಕೆ ಬಂದು ರಾವಣನನ್ನು ಕೊಂದ ಬ್ರಹ್ಮಹತ್ಯೆ ಪಾಪವನ್ನು ಪರಿಹರಿಸು

ಎಂದು ಶಿವನನ್ನು ಪ್ರಾರ್ಥಿಸಿದನು. ರಾಮನಾಥನ ಪ್ರತಿಷ್ಠೆಗೆ ಕೈಲಾಸ ಪರ್ವತದಿಂದ ಶಿವಲಿಂಗವನ್ನು ತರಿಸಲು ಹನುಮಂತನನ್ನು ಶ್ರೀರಾಮನು ಕಳುಹಿಸಿದನು. ಆಂಜನೇಯನು ಲಿಂಗವನ್ನು ತರುವಷ್ಟರಲ್ಲಿ ಸೀತಾದೇವಿ ಮರಳಿನಿಂದ ಲಿಂಗವನ್ನು ತಯಾರಿಸಿದಳು. ಅವಳ ಪವಿತ್ರವಾದ ಹಸ್ತಸ್ಪರ್ಶದಿಂದ ಮರಳಲಿಂಗವು ಗಟ್ಟಿಯಾಗಿ ಅಲ್ಲಿಯೇ ನೆಲಸಿತು. ಈ ಲಿಂಗ ಪ್ರತಿಷ್ಠೆ ನಡೆದ ನಂತರ ಆಂಜನೇಯನು ಆತುರಾತುರವಾಗಿ ಕೈಲಾಸಪರ್ವತದಿಂದ ಲಿಂಗದೊಂದಿಗೆ ಹಿಂದಿರುಗಿದನು. ಆ ವೇಳೆಗಾಗಲೇ ಅಲ್ಲಿ ಒಂದು ಲಿಂಗದ ಪ್ರತಿಷ್ಠೆಯಾಗಿರುವುದನ್ನು ಕಂಡು ಕೋಪೋದ್ರೇಕದಿಂದ ಆ ಲಿಂಗವನ್ನು ಛಿದ್ರಗೊಳಿಸಲು ವಿಫಲ ಪ್ರಯತ್ನ ಮಾಡಿದನು. ಶ್ರೀ ರಾಮನು ಹನುಮಂತನನ್ನು ಸಮಾಧಾನಗೊಳಿಸಿ ಸೀತಾದೇವಿ ಪ್ರತಿಷ್ಠಿಸಿದ ಲಿಂಗದ ಪಕ್ಕದಲ್ಲಿಯೇ ಆಂಜನೇಯನು ತಂದ ಲಿಂಗವನ್ನು ಪ್ರತಿಷ್ಠಾಪಿಸಿದನು. ಮತ್ತು "ನೀತಂದ ಲಿಂಗಕ್ಕೆ ಮೊದಲ ಪೂಜೆ, ನಂತರ ರಾಮನಾಥ ಲಿಂಗಕ್ಕೆ ಪೂಜೆ" ಎಂದು ಆದೇಶಿಸಿದನು. ಆಂಜನೇಯನು ಪ್ರತಿಷ್ಠಾಪಿಸಿದ ಲಿಂಗ ವಿಶ್ವಲಿಂಗವೆಂದೂ, ಸೀತಾದೇವಿ ಪ್ರತಿಷ್ಠಾಪಿಸಿದ ಲಿಂಗ ರಾಮಲಿಂಗವೆಂದೂ ಪ್ರಖ್ಯಾತವಾಗಿದೆ.

ಶ್ರೀ ರಾಮೇಶ್ವರ ದೇವಾಲಯ ದ್ರಾವಿಡ ಶಿಲ್ಪಕ್ಕೆ ಉತ್ತಮಸಾಕ್ಷಿ. ಈ ದೇವಾಲಯ 685 ಅಡಿ ಉದ್ದ, 657 ಅಡಿ ಅಗಲ ಮತ್ತು 49 ಅಡಿ ಎತ್ತರವಿದೆ. ದೇವರ ಸನ್ನಿಧಿ ಗ್ರಾನೈಟ್ ಕಲ್ಲಿನಿಂದ ನಿರ್ಮಾಣವಾಗಿದೆ. ದೇವಾಲಯದ ಪಕ್ಕದ ಮೂರು ಮಂಟಪಗಳು 4000 ಅಡಿ ಉದ್ದವಾಗಿದ್ದು ಪ್ರಪಂಚದ ಅದ್ಭುತಗಳಲ್ಲಿ ಸೇರಿವೆ. ದೇವಾಲಯ 25 ಅಡಿಗಳ ಎತ್ತರವುಳ್ಳ 1200 ಸ್ತಂಭಗಳ ಭಾರವನ್ನು ಭರಿಸಿದೆ. ಪೂರ್ವಗೋಪುರ 130 ಅಡಿ ಎತ್ತರ. ಪಶ್ಚಿಮ ಗೋಪುರ 80 ಅಡಿ ಎತ್ತರವಿದೆ. ಈ ದೇವಾಲಯ ಶ್ರೀ ರಾಮನ ಕಾಲದಿಂದ ನೂರಾರು ವರ್ಷಗಳಲ್ಲಿ ಭಕ್ತರು ಅಭಿಮಾನಿಗಳಿಂದ ನಿರ್ಮಾಣವಾದದ್ದು. ಸಿಂಹಳದ ರಾಜ ಪರಾಕ್ರಮಬಾಹು ವಿಸ್ತೀರ್ಣವಾದ ಗರ್ಭಗುಡಿಯನ್ನು ಕಟ್ಟಿಸಿದನೆಂದು ಚರಿತ್ರೆ ತಿಳಿಸುತ್ತದೆ. 12ನೆಯ ಶತಮಾನದ ಉದಯನ ಸೇತುಪತಿ, ತಿರುಮಲಸೇತುಪತಿ, ರಘುನಾಥ ಸೇತುಪತಿ ಮತ್ತು ರಾಮಸೇತುಪತಿ ಈ ದೇವಾಲಯದ ನಿರ್ಮಾಣಕ್ಕೆ ಶ್ರಮಿಸಿದ್ದಾರೆಂದು ತಿಳಿದುಬರುತ್ತದೆ.

ದೇವಾಲಯದಲ್ಲಿ ಮಹಾಲಕ್ಷ್ಮಿತೀರ್ಥ, ಸಾವಿತ್ರಿತೀರ್ಥ, ಗಾಯತ್ರಿ ತೀರ್ಥ, ಸರಸ್ವತಿತೀರ್ಥ, ಸೇತುಮಾಧವತೀರ್ಥ, ಗಂಧಮಾದನತೀರ್ಥ, ಕವಚತೀರ್ಥ, ಗವಯತೀರ್ಥ, ಗಳತೀರ್ಥ, ನೀಲತೀರ್ಥ, ಶಂಕರತೀರ್ಥ, ಚಕ್ರತೀರ್ಥ, ಬ್ರಹ್ಮಹತ್ಯಾ ಪಾತಕ ವಿಮೋಚನಾತೀರ್ಥ, ಸೂರ್ಯತೀರ್ಥ, ಚಂದ್ರತೀರ್ಥ, ಗಂಗಾತೀರ್ಥ, ಯುಮುನಾತೀರ್ಥ, ಗಯಾತೀರ್ಥ, ಶಿವತೀರ್ಥ, ಸತ್ಯಾಮೃತತೀರ್ಥ, ಸರ್ವತೀರ್ಥ ಮತ್ತು ಕೋಟಿ ತೀರ್ಥಗಳಿದ್ದು ಜಟಾತೀರ್ಥ, ಆಸ್ತಿಕರ ಭಕ್ತಿ ಸಂವರ್ಧನೆಗೆ ಕಾರಣವಾಗಿದೆ.

ಪೂಜ್ಯ ಶ್ರೀಗಳವರೊಡನೆ ನಾವು ಪಾಂಬನ್ (ಇಂದಿರಾ ಪ್ರಿಯದರ್ಶಿನಿ) ಸೇತುವೆ ತಲುಪಿದಾಗ ಬೆಳಗ್ಗೆ ಹನ್ನೊಂದು ಘಂಟೆಯಾಗಿತ್ತು. ದ್ವೀಪದ ಸುತ್ತ ಹರಡಿದ ಸಾಗರ ದರ್ಶನದಿಂದ ರೋಮಾಂಚನವಾಯಿತು. ರಾಮೇಶ್ವರದ ಪುಣ್ಯಭೂಮಿ ಸ್ಪರ್ಶಿದ ಅನುಭವ ಮಾತು ಮನಂಗಳಿಂದತತ್ತವೆಂಬಂಥದ್ದು. ದೇವಾಲಯಕ್ಕೆ ಪೂರ್ಣಕುಂಭ ಸ್ವಾಗತ ನೀಡಿದರು ವ್ಯವಸ್ಥಾಪಕರು ಪೂಜ್ಯಶ್ರೀಗಳವರಿಗೆ. ಒಳಾಂಗಣದ ನೆಲವೆಲ್ಲ ಶಿಲೆಯಿಂದ ಹೊದಿಕೆಗೊಂಡಿದೆ. ಜಲಮಯ ನಡೆವೆಡೆಯೆಲ್ಲ. ಅಲ್ಲಲ್ಲಿ ತೀರ್ಥಸ್ನಾನ ಮಾಡುವ ಭಕ್ತರ ಪವಿತ್ರ ಸ್ನಾನದಿಂದ. ಶ್ರೀಗಳವರು ನಿಧಾನವಾಗಿ ಹೆಜ್ಜೆಯಿಡುತ್ತಾ ಒಂದೊಂದೂ ಮಂಟಪ, ಕಂಭಗಳ ಸಾಲನ್ನು ನೋಡುತ್ತಾ ಮುಂದುವರಿದರು. ಪೂರ್ವಿಕರ ಆಸ್ತಿಕ ಶ್ರದ್ಧೆಯ ಸಂಕೇತವಾದ ವಾಸ್ತುಶಿಲ್ಪವನ್ನು ಕಣ್ಣಿಟ್ಟು ಗಮನಿಸುತ್ತಿದ್ದರು. ಮೂರನೆಯ ಕಾರಿಡಾರ್‌ಗೆ ಪ್ರವೇಶಿಸುತ್ತಿದ್ದಂತೆಯೆ ತಲೆಯೆತ್ತಿ ಛಾವಣಿಗೆ ಹಾಸಿದ್ದ ಉದ್ದುದ್ದದ ಕಲ್ಲುಗಳನ್ನು ಕಂಡು ಶ್ರೀಮಠದಲ್ಲಿ ನಿರ್ಮಾಣವಾಗುತ್ತಿರುವ ಶಿವಯೋಗ ಮಂದಿರವನ್ನು ಜ್ಞಾಪಿಸಿಕೊಂಡು ಮುಂಚೆ ಈ ದೇವಾಲಯಕ್ಕೆ ಬಂದು ಹೋಗಿದ್ದರೆ ಶಿವಯೋಗ ಮಂದಿರದ ಛಾವಣಿಗೆ ಆರ್.ಸಿ.ಸಿ. ಬದಲು ಕಲ್ಲುಗಳನ್ನೇ ಹಾಕಿಸಬಹುದಾಗಿತ್ತು ಎಂದರು ಶ್ರೀ ಬಿ. ಗಂಗಾಧರಯ್ಯ ಅವರತ್ತ ನೋಡುತ್ತ. ಹಾಗೆಯೇ ಮುಂದೆ ಬರುತ್ತಿದ್ದಾಗ ಕೋಟಿ ಕೋಟಿ ರೂ.ಗಳ ಶಿಲ್ಪ ನಿರ್ಮಾಣವನ್ನು ಶ್ರೀ ಕೆ.ಎಚ್. ಪರಮಶಿವಯ್ಯನವರು ಆರ್ಥಿಕ ದೃಷ್ಟಿಯಿಂದ ಇದೆಲ್ಲಾ ಎಷ್ಟೊಂದು ವೇಸ್ಟ್ ಎಂದಾಗ ಲೇಖಕ, ಸಾಂಸ್ಕೃತಿಕ ವೈಭವವನ್ನು ಆ ದೃಷ್ಟಿಯಿಂದ ನೋಡಬಾರದಲ್ಲವೆ? ಎನ್ನಬೇಕಾಯಿತು. ಶ್ರೀಗಳವರು ಮೌನವಾಗಿ ನಮ್ಮತ್ತ ತಿರುಗಿ ನೋಡಿದಾಗ ನಾವು ಆತಂಕಿತರಾದೆವು. ಅಲ್ಲೊಂದು ಕಡೆ ಸಚಿವರೊಬ್ಬರು ಭಾಷಣ ಕುಟ್ಟುತ್ತಿದ್ದರು. ಧರ್ಮಶ್ರವಣ, ಪುರಾಣಪ್ರವಚನಗಳು ನಡೆಯಬೇಕಾದಕಡೆ ರಾಜಕೀಯದ ಭಾಷಣಗಳು





ಜರುಗವಂತಾದುದು ಕಾಲಕರ್ಮದ ದುಸ್ಥಿತಿ. ದೇವಾಲಯದ ಪಶ್ಚಿಮ ದ್ವಾರಕ್ಕೆ ಬಂದಾಗ ಕರ್ನಾಟಕದ ಪೋಲೀಸಿನ ಬಂಧುವೊಬ್ಬ ಕನಕಪುರ ಶ್ರೀಗಳ ಭಕ್ತನಾಗಿದ್ದು ಸಂತೋಷದಿಂದ ಪೂಜ್ಯರೀರ್ವರಿಗೂ ನಮಸ್ಕರಿಸಿ ಧನ್ಯಭಾವಿತನಾದ. ಆನೆಯೊಂದು ಪೂಜ್ಯರಿಗೆ ನಮಸ್ಕರಿಸಿತು. ಹಸುವೊಂದು ಶ್ರೀಗಳವರ ಕೈಯಿಂದ ಬಾಳೆಹಣ್ಣು ತಿಂದಿತು. ಹಿಂದಿರುಗಿ ಬರುವಾಗ ಒಂದು ಕಡೆ ನೀರಿನಲ್ಲಿ ನೀರ್ಗಲ್ಲು ಮುಳುಗಿಸಿ ಅದು ತೇಲುತ್ತಿರುವುದನ್ನು ಭಕ್ತಾದಿಗಳಿಗೆ ಪವಾಡವೆಂಬಂತೆ ವರ್ಣಿಸುತ್ತಿದ್ದ ವ್ಯವಸ್ಥಾಪಕರನ್ನು ಶ್ರೀ ಕೆ.ಎಚ್.ಪಿ. ಮಾತಿನ ಮೂಲಕ ಚುಚ್ಚಿದಾಗ ಲೇಖಕ ವ್ಯವಸ್ಥಾಪಕರನ್ನು ಸಮಾಧಾನಗೊಳಿಸಬೇಕಾಯ್ತು. ಶ್ರೀಗಳವರು ಮುಂದಾದರು. ಗಂಧಮಾಧನಪರ್ವತ ಅಥವಾ ಶ್ರೀರಾಮಪಾದ ಬೆಟ್ಟಕ್ಕೆ ಹೊರಟೆವು. ಆ ಗಿರಿಯ ಮೇಲೆ ಎರಡು ಪಾದದ ಗುರುತಿದ್ದು, ಎತ್ತರವಾದ ಸ್ಥಳ. ಸಮುದ್ರದ ರಮ್ಯ ದೃಶ್ಯವನ್ನು ಅಲ್ಲಿಂದ ಕಾಣಬಹುದು. ಶ್ರೀರಾಮಪಾದ ಬೆಟ್ಟವೆಂದು ಕರೆದು ಭಕ್ತರನ್ನು ಆಕರ್ಷಿಸುವ ತಂತ್ರವಿದು ಎಂದು ಸಹಪ್ರವಾಸಿಗನಾಗಿ ಬಂದಿದ್ದ ಶ್ರೀ ಮಾಣಿಕ್ಯ ಹೇಳಿದ್ದ ಸಹಜವೆನಿಸಿತು. ಎಳನೀರಿನ ಸಮಾರಾಧನೆಯಾಯಿತು. ಅಲ್ಲಿ ಶ್ರೀ ಪ್ರಕಾಶ್ ಅವರಿಂದ ಹಿಂಪಯಣ ಪ್ರಾರಂಭವಾಯಿತು. ಊಟದ ಚಿಂತೆ ನಮಗೆ. ಪೂಜ್ಯ ಶ್ರೀಗಳವರು ಪಾಂಬನ್ ಸೇತುವೆಯ ಮೇಲೆ ನಿಂತರು. ನೋಡುವಲ್ಲಿ ನಿಂತೇ ಬಿಟ್ಟರು. ಸಮುದ್ರದ ವೈಭವವನ್ನು ನೋಡುವಲ್ಲಿ ನಿಂತೇ ಬಿಟ್ಟರು. ಅದೆಷ್ಟು ಹೊತ್ತು ನಿಂತರೋ ಗಂಭೀರ ಮೌನಸಾಗರವಾದರು. ಅದೆಷ್ಟು ಹೊತ್ತು ನಿಂತರೋ ತಿಳಿಯದಂತಾಯಿತು. ಅಷ್ಟರಲ್ಲಿ ಟ್ರೈನ್ ಚುಕುಬುಕು ಎನ್ನುತ್ತಾ ಬರುತ್ತಿತ್ತು. ಅದೊಂದು ಚೇತೋಹಾರಿನೋಟ. ಜೀವನ ರೈಲು ಪ್ರಯಾಣದಂತೆ ಒಂದು ಮಹಾಯಾತ್ರೆಯಲ್ಲವೆ ಎನಿಸಿತು. ಶ್ರೀ ಪ್ರಕಾಶ್ ಅವರು ಎಲ್ಲರಿಗೂ ಲಾಡು ಕೊಡಿಸಿದರು. ಮುಕ್ಕಿದೆವು. ಶ್ರೀ ಯಾಳೇಹಳ್ಳಿ ಮಹಾದೇವಪ್ಪ ಸೌತೆಕಾಯಿ ಕೊಡಿಸಿದರು. ಕೊಂಚ ಸಮಯ ಕಳೆಯಿತು. ಮಧುರೆಯತ್ತ ಮುಖಮಾಡಿದೆವು. ಶ್ರೀಗಳವರ ಕಾರು ಚಲಿಸಿತು ವೇಗವಾಗಿ. ನಾವು ಹಿಂದಾದೆವು. ಮಧ್ಯೆ ರಾಮನಾಥಪುರಕ್ಕೆ ಬರುವಾಗ ಒಂದೇ ಒಂದು ಕನ್ನಡದ ಬ್ಯಾನರ್ ಕಾಣಿಸಿತು. ತುಂಬಾ ಸಂತೋಷವಾಯಿತು. ರಾಮನಾಥಪುರದಲ್ಲಿ ಹೋಟೆಲಿನಲ್ಲಿ ಊಟ ಮಾಡಿದೆವು. ಸುಮಾರಾಗಿತ್ತು. ಇಬ್ಬರು ಸೋದರಿಯರು ಮಾತ್ರ ತಾವು ತಿಂಡಿ ತಿನ್ನುತ್ತೇವೆ ಎಂದು 'ನಿಂಬುಬಾತ್' ತರಿಸಿಕೊಂಡರು. ಅದೇನೋ ಹೊಸರುಚಿ ಎಂದುಕೊಂಡಿರ ಬೇಕು. ಅದು 'ಚಿತ್ರಾನ್ನ'ವೆಂದು ಗೊತ್ತಾದಮೇಲೆ ನಾವೂ ಊಟ ಮಾಡಿದ್ದರೇ ಚೆನ್ನಾಗಿತ್ತುಕೊಂಡರು. ಕಾರ್ ಡ್ರೈವರ್ ಶ್ರೀ ಸುರೇಶ್ ಇದುವೇ ಚಿತ್ರನಟ ಕಮಲಹಾಸನ್ ಮನೆ ಎಂದು ತೋರಿಸಿದಾಗ ಚಿತ್ರನಟ ಕನ್ನಡದಲ್ಲಿ ಮಾಡಿದ ಚಿತ್ರಗಳ ನೆನಪಾಯಿತು.

ಮಧುರೆಗೆ ಬಂದಾಗ ರಾತ್ರಿ ಒಂಬತ್ತು ಗಂಟೆ. ಊಟ ಮುಗಿಸಿ ನಾವಿದ್ದ ವಸತಿಗೃಹಗಳಿಗೆ ತೆರಳಿ ಮಲಗಿದೆವು. ಪ್ರವಾಸದ ಅನುಭವಗಳನ್ನು ಮೆಲುಕುಹಾಕುತ್ತ, ನಿದ್ದೆ ಬಂದದ್ದೆ ತಿಳಿಯಲಿಲ್ಲ.

(ಮುಂದುವರೆಯುತ್ತದೆ)

ಬಡಪಶು ಪಂಕದಲ್ಲಿ ಬಿದ್ದೊಡೆ ಕಾಲ ಬಡಿವುದಲ್ಲದೆ  
ಬೇರೆ ಗತಿಯುಂಟೆ?  
ಶಿವಾ ಶಿವಾಃ ಹೋವಹೇ, ಹೋದಹೆನಯ್ಯಾ;  
ನಿಮ್ಮ ಮನದತ್ತಲೆನ್ನ ತೆಗೆಯಯ್ಯಾ-  
ಪಶುನಾನು; ಪಶುಪತಿ ನೀನು;  
ತುಡುಗುಣಿಯೆಂದು ಎನ್ನ ಹಿಡಿದು ಬಡಿಯದ ಮುನ್ನ,  
ಒಡೆಯ ನಿಮ್ಮ ಬಯ್ಕೆದಂತೆ ಮಾಡು.  
ಕೂಡಲ ಸಂಗಮದೇವಾ.

\- ಬಸವಣ್ಣ

ಕರಿ ಘನ ಅಂಕುಶ ಕಿರಿದೆನ್ನಬಹುದೇ? ಬಾರದಯ್ಯಾ,  
ಗಿರಿ ಘನ ವಜ್ರ ಕಿರಿದೆನ್ನಬಹುದೇ? ಬಾರದಯ್ಯಾ;  
ತಮಂಧ ಘನ ಜ್ಯೋತಿ ಕಿರಿದೆನ್ನಬಹುದೇ? ಬಾರದಯ್ಯಾ,  
ಮರಹು ಘನ ನಿಮ್ಮ ನೆನೆವ ಮನ ಕಿರಿದೆನ್ನಬಹುದೇ?  
ಬಾರದಯ್ಯಾ, ಕೂಡಲ ಸಂಗಮದೇವಾ.

* * *

ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ  
ನಿಮ್ಮಪಾದ ಸಾಕ್ಷಿ, ಎನ್ನಮನ ಸಾಕ್ಷಿ  
ಕೂಡಲಸಂಗಮದೇವಾ ಎನಗಿದೇ ದಿಬ್ಯ !

\- ಬಸವಣ್ಣ

# ಅರವತ್ತುಮೂರು ಪುರಾತನ ಶರಣರು

(ಕಳೆದ ಸಂಚಿಕೆಯಿಂದ)



- ಡಾ. ಬಿ.ಎಸ್. ಸ್ವಾಮಿ
ಕಾರ್ಯಕ್ರಮ ನಿರ್ವಹಣಾಧಿಕಾರಿ,
ಆಕಾಶವಾಣಿ, ಬೆಂಗಳೂರು.

## ೨೩ ಇರಿ ಭಕ್ತರು

ಚೋಳದೇಶದಲ್ಲಿನ ಕರಿಯೂರಿನಲ್ಲಿ ಪಗಲ್ಚೋಳನೆಂಬ ರಾಜ ಪ್ರಖ್ಯಾತನಾಗಿದ್ದ. ಅಲ್ಲಿಗೆ ಇರಿ ಭಕ್ತನೆಂಬ ಶಿವಭಕ್ತ ಬಂದು ನೆಲಸಿದ. ಈತ ಶಿವಲಿಂಗದೆದುರು ನಮಸ್ಕರಿಸಿ ಆಯುಧವನ್ನು ಧರಿಸಿ ನಿನ್ನ ನಿಯಮಕ್ಕೆ ಎದುರಾಗಿ ನಡೆದವರನ್ನು ಶಿಕ್ಷಿಸುವುದೇ ನನ್ನ ಕಾಯಕ ಎಂದು ಪಣತೊಟ್ಟ. ಶಿವಭಕ್ತರನ್ನು ಕಂಡರೆ ನಮಸ್ಕರಿಸುತ್ತಿದ. ಈತನನ್ನು ಕಂಡ ಶಿವಭಕ್ತರು ಸಂತೋಷಪಟ್ಟರು. ಭವಿಗಳು ಅಸೂಯೆಪಟ್ಟರು.

ಒಬ್ಬ ಭವಿ ಈತನ ಗರ್ವಭಂಗಮಾಡಲು, ರುದ್ರಾಕ್ಷಿ, ಭಸ್ಮ ಧಾರಣೆಮಾಡಿಕೊಂಡು ಬಂದು, ಆತನೆದುರು ಅಳಿಸಲು ಇರಿಭಕ್ತರು ಆತನ ಶಿರವನ್ನು ಛೇದಿಸಿದರು. ಆತನ ಕಡೆಯವರೆಲ್ಲಾ ರಾಜನಲ್ಲಿ ಹೋಗಿ ದೂರು ಕೊಟ್ಟರು. ರಾಜ ಇರಿಭಕ್ತರನ್ನು ಕರೆಸಿ ಕೇಳಿದ.

"ಜನರು ಅವರವರ ಧರ್ಮಕ್ಕನುಗುಣವಾಗಿ ನಡೆಯುತ್ತಾರೆ ವಿಭೂತಿ, ರುದ್ರಾಕ್ಷಿ, ಇಲ್ಲವೆಂದು ಕೊಲ್ಲುವುದು ಯಾವ ಧರ್ಮ? ಆತ ನಿರಪರಾಧಿಯಲ್ಲವೇ?"

"ನನ್ನ ಕಾಯಕದಂತೆ, ರುದ್ರಾಕ್ಷಿ, ಭಸ್ಮ ಇಲ್ಲದವರ ದರ್ಶನ ಮಾಡೆನು. ನನ್ನೆದುರು ಬಂದು ಭಸ್ಮ ಅಳಿಸಿ ಶಿವನಿಂದೆ ಮಾಡಿದ, ಅದಕ್ಕಾಗಿ ಹಾಗೆ ಮಾಡಿದೆ"

"ಹಾಗಾದರೆ ನಿಮ್ಮ ಭಸ್ಮದಿಂದ ಸತ್ತವರು ಬದುಕುವರೇ?"

"ಆತನ ಬಂಧು ಬಾಂಧವರು ಶಿವಭಕ್ತರಾದರೆ ಸಾಧ್ಯ" ಅವರೆಲ್ಲಾ "ನಾವು ಅದಕ್ಕೆ ಸಿದ್ಧರಾಗಿದ್ದೇವೆ" ಎಂದರು. ಇರಿಭಕ್ತರು ಪಾದತೀರ್ಥ ಹಾಕಿ, ಆತನ ಶಿರಸ್ಸಿನ ಮೇಲೆ ವಿಭೂತಿ ಧರಿಸಿ ಪಾದ ಇಡಲು ಆತ ಎದ್ದು ಕುಳಿತ.

ಎಲ್ಲರೂ ಇರಿಭಕ್ತನಿಗೆ ನಮಸ್ಕರಿಸಿ ಶಿವಭಕ್ತರಾದರು.

ರಾಜ ಸತ್ಕರಿಸಿ ಆತನಿಗೆ ಗಜಾಂಕುಸರೆಂಬ ಬಿರುದು ಕೊಟ್ಟ.

ಒಮ್ಮೆ ಶಿವಗಾವಿ ಎಂಬ ಶಿವಭಕ್ತ, ಶಿವನ ಪೂಜೆಗೆ ಹೂಗಳನ್ನು ತರುತ್ತಾ ಬರುತ್ತಿರಲು, ಪಗಲ್ಚೋಳನ ಪಟ್ಟದಾನೆ ಅನೇಕ ಜನರ ಮೇಲೆರಗಿ ಬರುತ್ತಿರಲು ಶಿವಗಾವಿಯ ಹೂವನ್ನು ಆಕಾಶಕ್ಕೆ ಚೆಲ್ಲಿತು. ಶಿವಗಾವಿ ಇರಿಭಕ್ತನಲ್ಲಿ ಮೊರೆ ಇಟ್ಟ. ಇರಿಭಕ್ತರು ಬಂದು ನೋಡಿದರು. ಹೂಚೆಲ್ಲಿತ್ತು. ಆನೆಯ ಮೇಲೆ ತಮ್ಮ ಆಯುಧ ಪ್ರಯೋಗಿಸಲು ಆನೆ ಮಡಿಯಿತು. ರಾಜರಿಗೆ ಈ ವಿಷಯ ತಿಳಿಯಿತು. ರಾಜ ಬಂದು "ನನ್ನ ಆನೆ ಮಾಡಿದುದು ತಪ್ಪಾಯಿತು ಕ್ಷಮಿಸಿ" ಎಂದು ನಮಸ್ಕರಿಸಿದ. ಆಗ ಇರಿಭಕ್ತ ಭಕ್ತ ಶ್ರೇಷ್ಠನ ಆನೆಯನ್ನು ನಾನೇಕೆ ಕೊಂದೆ, ಎಂದು ಪಶ್ಚಾತ್ತಾಪ ಪಟ್ಟು, "ತನ್ನ ಶಿರವನ್ನೇ ಕತ್ತರಿಸಿ ಕೊಳ್ಳುವೆ". ಎಂದು ಸಿದ್ಧನಾಗಲು ಶಿವನು ಪ್ರತ್ಯಕ್ಷನಾಗಿ ರಾಜನ ಪಟ್ಟದಾನೆಗೆ ಪ್ರಾಣದಾನ ನೀಡಿ ಇರಿಭಕ್ತರನ್ನು ಕೈಲಾಸಕ್ಕೆ ಕರೆದುಕೊಂಡು ಹೋದ.

## ೨೪ ಕಳಚೆಂಗ ಪರುಮಾಳೆಯರು

ಕಾವೇರಿ ನದಿ ತೀರದಲ್ಲಿ ಒಂದು ನೇರಳೆ ಮರದ ಕೆಳಗೆ ಶಿವಲಿಂಗವಿತ್ತು. ಹಿಂದಿನ ಜನ್ಮದ ಫಲದಿಂದ ಒಬ್ಬ ಶಿವ ಭಕ್ತ ಜೇಡರ ಹುಳುವಾಗಿ ಹುಟ್ಟಿ ಬಲೆಯನ್ನು ಹೆಣೆದು ಶಿವಲಿಂಗಕ್ಕೆ ಬಿಸಿಲು ಬೀಳದಂತೆ ಮಾಡಿ, ಪೂಜಿಸಿ, ಸಂತಸ ಪಡುತ್ತಿತ್ತು. ಒಂದು ಆನೆ ಬಂದು ಸೊಂಡಿಲಿನಿಂದ ನೀರು ತಂದು ಆ ಜೇಡರ ಬಲೆಯನ್ನು ಕೀಳುತ್ತಿತ್ತು. ದಿನವೂ ಹೀಗೆ ಮಾಡುತ್ತಿರಲು ಕೋಪಗೊಂಡ ಜೇಡ ಹುಳುವು ಆನೆಯ ಸೊಂಡಿಲೊಳಗೆ ಹೋಗಿ ಅದನ್ನು ಸಾಯಿಸಿ, ತಾನೂ ಸತ್ತಿತು. ಜೇಡಹುಳುವು ಚೋಳಕುಲದ ಕಳಚೆಂಗಪೆರುಮಾಳರ್ ಎಂಬ ಹೆಸರಲ್ಲಿ ಹುಟ್ಟಿತು. ಆನೆ ಯಕ್ಷರಾಕ್ಷಸನಾಗಿ ಹುಟ್ಟಿತು. ರಾಜ ಒಮ್ಮೆ ಅರಣ್ಯಕ್ಕೆ ಬೇಟೆಗೆಂದು ಹೊರಟ. ಒಂದು ಭಯಂಕರ ಗುಹೆ ಕಂಡಿತು. ಅದನ್ನು ನೋಡಿದ. ರಾಜ ಅದರಲ್ಲೇನಿದೆ ನೋಡಿ ಬನ್ನಿ ಎಂದ. ಸೇವಕರು ಹೋಗಿ ಬಂದು ಅಲ್ಲಿಗೆ ಹೋಗಲು ಸಾಧ್ಯವಾಗದು ಎಂದರು. ಆಗ ತಾನೇ ಒಳಹೊಕ್ಕ. ಕತ್ತಲಲ್ಲಿ ರಾಕ್ಷಸನೊಬ್ಬ ಘರ್ಜಿಸಿದ.

"ನೀನು ಯಾರು'? ಹೇಗೆ ಬಂದೆ?" ಎಂದು ಘರ್ಜಿಸಿದ





"ನಾನು ಯಮನ ಸಂಹಾರ ಮಾಡಿದ ಬಂಟ" "ಹಾಗಾದರೆ ಯುದ್ಧಕ್ಕೆ ಸಿದ್ಧನಾಗು" "ಆಗಲಿ" ಎಂದ.

ಇಬ್ಬರೂ ಮಲ್ಲ ಯುದ್ಧ, ಖಡ್ಗಯುದ್ಧ, ಮಾಡಿದರು. ಸೋತ ರಾಕ್ಷಸಯಕ್ಷ, ಆತನ ಪರಾಕ್ರಮಕ್ಕೆ ಮೆಚ್ಚಿ ತನ್ನ ನಿಜರೂಪ ತೋರಿ, ಹಿಂದಿನ ಜನ್ಮದ ಜ್ಞಾಪಕ ಮಾಡುತ್ತಾನೆ. ಭಕ್ತಿಯಿಂದ ಅಲ್ಲಿದ್ದ ಶಿವಲಿಂಗದ ಹತ್ತಿರ ಬಂದು ನನ್ನಮರೆವಿಗೆ ಕ್ಷೇಮ ಇರಲಿ ದೇವಾ ಎಂದು ಆ ಲಿಂಗವನ್ನು ಅರ್ಚಿಸುತ್ತಾ ತನ್ನ ಭಕ್ತಿಯನ್ನು ಮುಂದುವರಿಸಿದ.

ಒಮ್ಮೆ ಕಳಚೆಂಗಪೆರುಮಾಳರ ಹೆಂಡತಿ ಚೊಲ್ಲದಿನಾಚಿ ತಿರುವಾರೂರು ಗುಡಿಗೆ ಹೋಗಿದ್ದಾಗ ಅಲ್ಲಿನ ಶಿವಭಕ್ತ ಕಟ್ಟುತ್ತಿದ ಚಂಗಣಿಗಲೆ ಹೂವನ್ನು ಮೂಸಿದಾಗ, ಮೂಸಲು ಕೆಡಿಸಿದೆ ಎಂದು ಆಕೆಯ ಮೂಗನ್ನು ಕೊಯ್ದು ಕಳಚಂಗ ಪೆರುಮಾಳ್ ಮೂಸಲು ಸಹಕರಿಸಿದ ಕೈಯನ್ನೇ ಬಿಟ್ಟೆ, ಎಂದು ಹೇಳಿತನ್ನ ಹೆಂಡತಿಯ ಕೈಯನ್ನು ಕತ್ತರಿಸಿದ. ಆಗ ಶಿವನು ಪ್ರತ್ಯಕ್ಷನಾಗಿ ಆತನಿಗೆ ಗಣಪದವಿಯನ್ನಿತ್ತ.

## ೨೫ ನಮಿನಂದಿಯರು

ಚೋಳದೇಶದ ತಿರುವಾರೂರಿನಲ್ಲಿ ಪರಮ ಶಿವಭಕ್ತ ನಮಿನಂದಿಯರು ಶಿವಲಿಂಗಕ್ಕೆ ತುಪ್ಪದ ದೀಪ ಹಚ್ಚುತ್ತಾ ನಿಯಮದಿಂದ ಪಾಲಿಸುತ್ತಿದ್ದರು. ಜೈನರು ಇವರನ್ನು ಜರಿದು ತುಪ್ಪ ಸಿಗದಂತೆ ಮಾಡಿದರು. ಆಗ ಅವರು ಶಿವನಿಗೆ ಮೊರೆ ಇಡಲು ದನಗಳು ಸಾಯ ತೊಡಗಿದವು. ಆಮೇಲೆ ಜೈನರು ತುಪ್ಪಕೊಡಲಾರಂಭಿಸಿದರು. ಒಮ್ಮೆ ಪೂಜೆ ಮುಗಿಸಿ ಬರುವಾಗ ವಿಪರೀತ ಮಳೆ, ಓಡಿಬರುವಾಗ ಮರದ ಕೊರಡು ಎಡವಲು ಶಿವನೇ ಅವರನ್ನು ಹಿಡಿದು ನಿಲ್ಲಿಸುವನು. ಆಗ ನಮಿನಂದಿ ಬೆಚ್ಚುತ್ತಾರೆ.

"ಏನು ಬೇಕು ಹೇಳು?" ಎನ್ನಲು, "ನನಗೇನು ಬೇಡ, ಈ ಕತ್ತಲಲ್ಲಿ ಮಳೆಯಲ್ಲಿ ನೀನು ಹೊರಗೆ ಬಂದರೆ ನನ್ನಾಣೆ" ಎಂದ, ಆತನ ಭಕ್ತಿ ವಾತ್ಸಲ್ಯಕ್ಕೆ ಮೆಚ್ಚಿ ಈಶ್ವರ ಕೈಲಾಸಕ್ಕೊಯ್ದು ಗಣಪದವಿ ನೀಡಿದ.

## ೨೬ ಅಮರ ನೀತಿಗಳು

ಚೋಳ ಮಂಡಲದ ತಿರುನಲ್ಲೂರಿನಲ್ಲಿ ಅಮರನೀತಿ ಎಂಬ ಶಿವಭಕ್ತ ಹೆಂಡತಿ ಕನಕಮಾಲೆ, ಮಗ ಧನದತ್ತನೊಂದಿಗೆ ಜೀವಿಸುತ್ತಿದ್ದ. ಜಂಗಮರಿಗೆ ವಸ್ತ್ರ ದಾನಮಾಡುತ್ತಿದ್ದ. ಅಮರನೀತಿಯ ಖ್ಯಾತಿ ಕೈಲಾಸಕ್ಕೂ ಮುಟ್ಟಿತು. ಈಶ್ವರ ಈತನನ್ನು ಕೈಲಾಸದಲ್ಲಿರಿಸಿಕೊಳ್ಳುವ ಆಸೆಯನ್ನು ತಿಳಿಸುತ್ತಾನೆ. ಅದಕ್ಕೆ ಆಕೆ ಒಪ್ಪುತ್ತಾಳೆ.

ವೃದ್ಧ ಜಂಗಮ ವೇಷಧಾರಿಯಾಗಿ ನಡುಗುತ್ತಾ ಬಂದ ಅಮರನೀತಿ ಆತನನ್ನು ನೋಡಿ ತನ್ನ ಮನೆಯೊಳಗೆ ಕರೆದೊಯ್ದು ಸತ್ಕರಿಸಿದ. "ನಿನಗೆಷ್ಟು ಬೇಕೋ ಅಷ್ಟು ಬಟ್ಟೆಯನ್ನು ತೆಗೆದುಕೋ" ಎಂದ.

"ಈಗ ನನಗೆ ಬೇಡ, ಈಗ ನಾನು ಬೇರೆ ಕಡೆಗೆ ಊಟಕ್ಕೆ ಹೋಗಬೇಕು. ಈಗ ನೀನು ಒಂದು ಕೆಲಸಮಾಡಬೇಕಲ್ಲಾ"

"ಏನು ಹೇಳಿ"

"ಈ ಕೌಪೀನವನ್ನು ತೆಗೆದುಕೋ. ಇದು ಅಷ್ಟ ಸಿದ್ಧಿಯನ್ನು ಕೊಡುವುದು. ಭದ್ರವಾಗಿಟ್ಟುಕೋ. ಯಾರಿಗೂ ಕೊಡಬೇಡ, ನಾನು ಬಂದು ತೆಗೆದುಕೊಂಡು ಹೋಗುತ್ತೇನೆ" "ಅಗತ್ಯವಾಗಿ ಆಗಲಿ" ಎಂದು ಹೇಳಿ, ಆ ಕೌಪೀನವನ್ನು ಒಂದು ಪೆಟ್ಟಿಗೆಯಲ್ಲಿ ಭದ್ರವಾಗಿರಿಸಿದ. ತನ್ನ ನಿತ್ಯ ಕಾಯಕಕ್ಕೆ ವೃದ್ಧ ಹೊರಟ.

ಒಂದು ದಿನ ಆ ವೃದ್ಧ ಬಂದು

"ನನ್ನ ಕೌಪೀನವನ್ನು ಕೊಡು ಅಮರನೀತಿ" ಎಂದ. ಆಗಲೀ ಎಂದು ಪೆಟ್ಟಿಗೆ ತೆಗೆದ. ಅದರಲ್ಲಿ ಆ ಕೌಪೀನವಿರಲಿಲ್ಲ. ಅದನ್ನು ನೋಡಿ ಅಮರನೀತಿಗೆ ಬೇಸಾರವಾಯ್ತು, ವೃದ್ಧನ ಹಿಂಸೆ ಹೆಚ್ಚಾಯ್ತು. ಆ ವೃದ್ಧನ ಕೌಪೀನವನ್ನು ಕೊಡು ಎಂದು ದನಿ ಏರಿಸಿದ. ಅದನ್ನು ಕೇಳಿದ ಅಮರ ನೀತಿಯು "ಅನುಯಾಯಿಗಳ ಸ್ವಾಮಿ ಕೋಪಗೊಳ್ಳಬೇಡಿ, ಕೂಗಬೇಡಿ, ಅಮರನೀತಿಗಳು ಮಹಾತ್ಯಾಗಿಗಳು, ಇಂಥ ಕೋಟಿ ಲಂಗೋಟಿಯನ್ನು ತರಿಸುವರು, ಗರ್ಜಿಸಬೇಡಿ"

"ನನಗೆ ಆ ಲಂಗೋಟಿಯೇ ಬೇಕು" ಎಂದು ಹಠ ಹಿಡಿದ ಆತ ಜನರೆಲ್ಲಾ ಹೋಗುತ್ತಿದ್ದರೂ ವೃದ್ಧ ಬಿಡಲಿಲ್ಲ.

"ಎಲ್ಲರೂ ಇರಿ, ನನ್ನ ಲಂಗೋಟಿಗೆ ಸಮವಾದ ವಸ್ತ್ರವನ್ನು ಕೊಡಲಿ" ಎನ್ನಲು ತಕ್ಕಡಿ ತರಿಸಿದ. ಆತ ಮತ್ತೊಂದು ಲಂಗೋಟಿ ಇಟ್ಟು, ಎಷ್ಟು ಧನ ಕನಕವಿಟ್ಟರೂ ಸರಿದೂಗಲಿಲ್ಲ. ಮಗನನ್ನು ಕುಳ್ಳಿರಿಸಿದ. ಹೆಂಡತಿಯನ್ನು ಕೂರಿಸಿದ. ಕೊನೆಗೆ ತಾನೇ ಕೂತ, ಆಗ ತಕ್ಕಡಿ ಸಮನಾಗಿ ತೂಗಿತು. ಅಮರನೀತಿಗೆ ಸಂತಸವಾಯ್ತು ಶಿವನ ಪ್ರೀತಿಗೆ ಪಾತ್ರನಾದೆ, ಎಂದು ಶಿವನನ್ನು ಸ್ತುತಿಸಿದ. ಆಗ ಆ ಜಂಗಮ ನಿಜರೂಪ ತೋರಿ ಮೂವರನ್ನು ಕೈಲಾಸಕ್ಕೆ ಕರೆದೊಯ್ದು, ಗಣಪದವಿ ನೀಡಿದ.

(ಮುಂದುವರೆಯುತ್ತದೆ.)

## ಮಹಾದಾಸೋಹ ನಿಧಿಗೆ 1101 ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರಸಂ. ಹೆಸರು ಮತ್ತು ವಿಳಾಸ | ಮೊತ್ತ |
|---|---|
| **227. ಶ್ರೀ ಕೆ.ಎಸ್. ಶಿವರುದ್ರಯ್ಯ**<br>ನಂ. 239, ಮೊದಲನೇ ಹಂತ<br>2ನೇ ಬ್ಲಾಕ್. ನಾಗರಬಾವಿ 4ನೇ ಕ್ರಾಸ್<br>ಕಲ್ಯಾಣ ನಗರ, 3ನೇ ಮುಖ್ಯ ರಸ್ತೆ<br>ಬೆಂಗಳೂರು-72. | 1,000-00 (2ನೇ ಕಂತು) |
| **228. ಶ್ರೀ ಯು.ಎಂ. ಗಿರಿಜೇಶ**<br>ಕಾಫಿ ಬೆಳೆಗಾರರು<br>ನಂ. 10/ಎ, ವಿಭವ, 27ನೇ ಕ್ರಾಸ್<br>ಕುವೆಂಪು ನಗರ, ಹಾಸನ. | 2,001-00 |
| **229. ಶ್ರೀ ಯು.ಎಂ. ತೀರ್ಥಮಲ್ಲೇಶ್**<br>ಕಾಫಿ ಬೆಳೆಗಾರರು<br>ಉಂಬಳಗೋಡು ಎಸ್ಟೇಟ್<br>ಮಲಸಾವರ ಅಂಚೆ, ಬೇಲೂರು ತಾ.<br>ಹಾಸನ ಜಿಲ್ಲೆ. | 2,002-00 |
| **230. ಶ್ರೀ ಎಸ್. ಸಿದ್ದಯ್ಯ**<br>ಶಿಕ್ಷಕರು, ಸನ್ಆಫ್ ಶ್ರೀ ಸಿದ್ದನಂಜಪ್ಪ<br>ಕಟ್ಟಿಗೆಹಳ್ಳಿ, ನೆಲ್ಲಿಕೆರ ಅಂಚೆ<br>ತಿಪಟೂರು ತಾ., ತುಮಕೂರು ಜಿಲ್ಲೆ | 2,001-00 |
| **231. ಶ್ರೀ ಮುನಿವೆಂಕಟಯ್ಯ**<br>ಎ.ಇ.ಇ., ಕೆಎಸ್ಎಸ್ಐಡಿಸಿ<br>ಹುಬ್ಬಳ್ಳಿ, ಧಾರವಾಡ ಜಿಲ್ಲೆ. | 1,101-00 |
| **232. ಶ್ರೀ ಸಿ.ಸಿ. ವಡ್ಡರ್**<br>ಕಾಂಟ್ರಾಕ್ಟರ್, ಹುಬ್ಬಳ್ಳಿ | 1,001-00 |
| **233. ಶ್ರೀ ಸಿ.ಸಿ. ಬಳ್ಳಾರಿ**<br>ವ್ಯವಸ್ಥಾಪಕರು, ಕೆಎಸ್ಎಸ್ಐಡಿಸಿ<br>ಹುಬ್ಬಳ್ಳಿ. ಧಾರವಾಡ ಜಿಲ್ಲೆ. | 1001-00 |
| **234. ಶ್ರೀ ಹೆಚ್.ಸಿ. ಶಿವಲಿಂಗಪ್ಪ**<br>ಅಸ್ಟಿಸ್ಟೆಂಟ್ ಎಕ್ಸಿಕ್ಯೂಟಿವ್ ಇಂಜಿನಿಯರ್<br>ಕೆಎಸ್ಎಸ್ಐಡಿಸಿ. ಹುಬ್ಬಳ್ಳಿ. | 1,101-00 |
| **235. ಶ್ರೀ ವಿ.ಬಿ. ಗುಡಿಯಾವರ್**<br>ಅಸ್ಟಿಸ್ಟೆಂಟ್ ಎಕ್ಸಿಕ್ಯೂಟಿವ್ ಇಂಜಿನಿಯರ್<br>ಕೆಎಸ್ಎಸ್ಐಡಿಸಿ. ಹುಬ್ಬಳ್ಳಿ. | 1,001-00 |
| **236. ಶ್ರೀ ಎನ್. ಪ್ರಕಾಶ್**<br>ಅಸ್ಟಿಸ್ಟೆಂಟ್ ಎಕ್ಸಿಕ್ಯೂಟಿವ್ ಇಂಜಿನಿಯರ್<br>ಕೆಎಸ್ಎಸ್ಐಡಿಸಿ<br>ಬೆಂಗಳೂರು. | 1,101-00 |
| **237. ಶ್ರೀ ಸೋಮಶೇಖರ್**<br>ಅಸ್ಟಿಸ್ಟೆಂಟ್ ಎಕ್ಸಿಕ್ಯೂಟಿವ್ ಇಂಜಿನಿಯರ್<br>ಕೆಎಸ್ಎಸ್ಐಡಿಸಿ<br>ಬೆಂಗಳೂರು. | 1,101-00 |
| **238. ಶ್ರೀ ಚನ್ನಬಸವಯ್ಯ**<br>ಲೇ. ಮುಮ್ಮಡಿ ನಂಜಪ್ಪ<br>ಕೆನಡಿ ಗೆಸ್ಟ್ ಹೌಸ್ ಹಿಂಭಾಗ<br>ಗಂಗೋತ್ರಿ ರಸ್ತೆ, ಎಸ್.ಐ.ಟಿ. ಬಡಾವಣೆ<br>ತುಮಕೂರು-3. | 3,001-00 |
| **239. ಶ್ರೀ ಶರಣಮಲ್ಲಪ್ಪ**<br>ತಾತಾ ಬೈಲೂರ್ ಅಂಚೆ<br>ಬಳ್ಳಾರಿ ತಾ. ಬಳ್ಳಾರಿ ಜಿಲ್ಲೆ. | 2,851-00 |
| **240. ಶ್ರೀ ಸೋಮಶೇಖರಯ್ಯ**<br>ಶಿಕ್ಷಕರು, ಕಡಬಗೆರೆ ಅಂಚೆ<br>ಬೆಂಗಳೂರು ಉತ್ತರ ತಾ.<br>ಪಿನ್‌ಕೋಡ್-562130 | 2,002-00 |
| **241. ಶ್ರೀ ಗುರುಶಾಂತಯ್ಯ**<br>ಗುಡೇಪಾಳ್ಯ, ಮಾಗಡಿ ತಾಲ್ಲೂಕು<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | 2,001-00 |
| **242. ಶ್ರೀ ರೇವಣಸಿದ್ಧಪ್ಪ**<br>ನಂ. 455, 2ನೇ ಮುಖ್ಯ ರಸ್ತೆ<br>ಭವಾನಿ ನಗರ, ಗವೀಪುರಂ ಬಡಾವಣೆ<br>ಬೆಂಗಳೂರು-560019. | 5,010-00 |
| **243. ಶ್ರೀ ಕೆ.ಪಿ. ಚಂದ್ರಶೇಖರಯ್ಯ ಮತ್ತು ಶ್ರೀಮತಿ ಶಿವಗಂಗಪ್ಪ**<br>ಶಿಕ್ಷಕರು, ಕದಿರೇನಹಳ್ಳಿ<br>ದಾಸನಪುರ ಹೋಬಳಿ<br>ಲಕ್ಷ್ಮೀಪುರ ಅಂಚೆ<br>ಬೆಂಗಳೂರು ಉತ್ತರ ತಾಲ್ಲೂಕು. | 2,002-00 |

(ಮುಂದುವರಿಯುತ್ತದೆ)





## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರಸಂ. ಹೆಸರು ಮತ್ತು ವಿಳಾಸ | ಮೊತ್ತ |
|---|---|
| **217. ಶ್ರೀ ಬಿ.ಹೆಚ್ ಶಾಂತರಾಜು**<br>ಮಗ್ಗೆ ಅಂಚೆ<br>ಆಲೂರು ತಾಲ್ಲೂಕು<br>ಹಾಸನ ಜಿಲ್ಲೆ. | 1,001-00 |
| **218. ಶ್ರೀ ಬಿ.ಎಲ್. ಹೊನ್ನಪ್ಪ**<br>ಸುಲ್‌ಗುಡ್ ಎಸ್ಟೇಟ್<br>ರಾಯರಕೊಪ್ಪಲು ಅಂಚೆ<br>ಆಲೂರು ತಾಲ್ಲೂಕು<br>ಹಾಸನ ಜಿಲ್ಲೆ. | 1,001-00 |
| **219. ಶ್ರೀ ಡಾ. ಸದಾಶಿವಪ್ಪ ಗದ್ದಿ**<br>''ಅಮರಕುಂಜ್''<br>ಚಂದ್ರಮೌಳೇಶ್ವರ ಬಡಾವಣೆ<br>ಕ್ಯಾತಸಂದ್ರ, ತುಮಕೂರು. | 1,001-00 |
| **220. ಶ್ರೀ ಮಲ್ಲಿಕಾರ್ಜುನಯ್ಯ**<br>ವಿಜಯ ನಗರ<br>ಬೆಂಗಳೂರು-40. | 1,001-00 |
| **221. ಶ್ರೀ ಕೆ.ಎಸ್. ಶಿವರುದ್ರಯ್ಯ**<br>ನಂ. 239, ಮೊದಲನೇ ಹಂತ<br>2ನೇ ಬ್ಲಾಕ್, ನಾಗಭಾವಿ 4ನೇ ಕ್ರಾಸ್<br>ಕಲ್ಯಾಣ ನಗರ 3ನೇ ಮುಖ್ಯರಸ್ತೆ<br>ಬೆಂಗಳೂರು-72 | 1,000-00 (2ನೇ ಕಂತು) |
| **222. ಶ್ರೀ ಯು.ಎಂ. ಗಿರಿಜೇಶ**<br>ಕಾಫಿ ಬೆಳೆಗಾರರು<br>ನಂ. 10/ಎ, ವಿಭವ, 27ನೇ ಕ್ರಾಸ್<br>ಕುವೆಂಪು ನಗರ, ಹಾಸನ. | 2,001-00 |
| **223. ಶ್ರೀ ಯು.ಎಂ. ತೀರ್ಥಮಲ್ಲೇಶ್**<br>ಕಾಫಿ ಬೆಳೆಗಾರರು<br>ಉಂಬಳಗೋಡು ಎಸ್ಟೇಟ್<br>ಮಲಸಾವರ ಅಂಚೆ, ಬೇಲೂರು ತಾ.<br>ಹಾಸನ ಜಿಲ್ಲೆ. | 2,202-00 |
| **224. ಶ್ರೀ ಎಸ್. ಸಿದ್ದಯ್ಯ**<br>ಶಿಕ್ಷಕರು, ಸನ್‌ಆಫ್ ಶ್ರೀ ಸಿದ್ದನಂಜಪ್ಪ<br>ಕಟ್ಟಿಗೆಹಳ್ಳಿ, ನೆಲ್ಲಿಕೆರ ಅಂಚೆ<br>ತಿಪಟೂರು ತಾ., ತುಮಕೂರು ಜಿಲ್ಲೆ | 2,001-00 |
| **225. ಶ್ರೀ ಮುನಿವೆಂಕಟಯ್ಯ**<br>ಎ.ಇ.ಇ., ಕೆಎಸ್ಎಸ್ಐಡಿಸಿ<br>ಹುಬ್ಬಳ್ಳಿ, ಧಾರವಾಡ ಜಿಲ್ಲೆ. | 1,101-00 |
| **226. ಶ್ರೀ ಸಿ.ಸಿ. ವಡ್ಡರ್**<br>ಕಾಂಟ್ರಾಕ್ಟರ್, ಹುಬ್ಬಳ್ಳಿ | 1,001-00 |
| **227. ಶ್ರೀ ಸಿ.ಸಿ. ಬಳ್ಳಾರಿ**<br>ವ್ಯವಸ್ಥಾಪಕರು, ಕೆಎಸ್ಎಸ್ಐಡಿಸಿ<br>ಹುಬ್ಬಳ್ಳಿ, ಧಾರವಾಡ ಜಿಲ್ಲೆ. | 1001-00 |
| **228. ಶ್ರೀ ಹೆಚ್.ಸಿ. ಶಿವಲಿಂಗಪ್ಪ**<br>ಅಸ್ಟಿಸ್ಟೆಂಟ್ ಎಕ್ಸಿಕ್ಯೂಟಿವ್ ಇಂಜಿನಿಯರ್<br>ಕೆಎಸ್ಎಸ್ಐಡಿಸಿ, ಹುಬ್ಬಳ್ಳಿ. | 1,101-00 |
| **229. ಶ್ರೀ ವಿ.ಬಿ. ಗುಡಿಯಾವರ್**<br>ಅಸ್ಟಿಸ್ಟೆಂಟ್ ಎಕ್ಸಿಕ್ಯೂಟಿವ್ ಇಂಜಿನಿಯರ್<br>ಕೆಎಸ್ಎಸ್ಐಡಿಸಿ, ಹುಬ್ಬಳ್ಳಿ. | 1,001-00 |
| **230. ಶ್ರೀ ಎನ್. ಪ್ರಕಾಶ್**<br>ಅಸ್ಟಿಸ್ಟೆಂಟ್ ಎಕ್ಸಿಕ್ಯೂಟಿವ್ ಇಂಜಿನಿಯರ್<br>ಕೆಎಸ್ಎಸ್ಐಡಿಸಿ, ಬೆಂಗಳೂರು. | 1,101-00 |
| **231. ಶ್ರೀ ಸೋಮಶೇಖರ್**<br>ಅಸ್ಟಿಸ್ಟೆಂಟ್ ಎಕ್ಸಿಕ್ಯೂಟಿವ್ ಇಂಜಿನಿಯರ್<br>ಕೆಎಸ್ಎಸ್ಐಡಿಸಿ, ಬೆಂಗಳೂರು. | 1,101-00 |
| **232. ಶ್ರೀ ಚನ್ನಬಸವಯ್ಯ**<br>ಲೇ. ಮುಮ್ಮಡಿ ನಂಜಪ್ಪ<br>ಕೆನಡಿ ಗೆಸ್ಟ್ ಹೌಸ್ ಹಿಂಭಾಗ<br>ಗಂಗೋತ್ರಿ ರಸ್ತೆ, ಎಸ್.ಐ.ಟಿ. ಬಡಾವಣೆ<br>ತುಮಕೂರು-3. | 3,001-00 |
| **233. ಶ್ರೀ ಶರಣಮಲ್ಲಪ್ಪ**<br>ತಾತಾ ಬೈಲೂರ್ ಅಂಚೆ<br>ಬಳ್ಳಾರಿ ತಾ.-ಬಳ್ಳಾರಿ ಜಿಲ್ಲೆ. | 2,851-00 |
| **234. ಶ್ರೀ ಸೋಮಶೇಖರಯ್ಯ**<br>ಶಿಕ್ಷಕರು, ಕಡಬಗೆರೆ ಅಂಚೆ<br>ಬೆಂಗಳೂರು ಉತ್ತರ ತಾ.<br>ಪಿನ್‌ಕೋಡ್-562130 | 2,002-00 |

(ಮುಂದುವರಿಯುತ್ತದೆ)

RNI No. 17139/69 "Siddaganga" Monthly - Postal Reg. No. KA/SK/TMR/385/2000